

ಭಗವಾನ್ ಶ್ರೀವೇದವ್ಯಾಸ ಪ್ರಣೀತ

# ಮಹಾಭಾರತ



ಸಮಗ್ರ ಶ್ಲೋಕಗಳ ಕನ್ನಡಾನುವಾದ

ಶ್ರೀಮದಾನಂದತೀರ್ಥಭಗವತ್ಪಾದರ ತಾತ್ಪರ್ಯನಿರ್ಣಯ ಹಾಗೂ

ಶ್ರೀವಾದಿರಾಜಗುರುಸಾರ್ವಭೌಮರ ಲಕ್ಷಾಲಂಕಾರದೊಂದಿಗೆ

ಭಾಗ-23

## ಗದಾಪರ್ವ, ಸೌಪ್ತಿಕಪರ್ವ ಮತ್ತು ಸ್ತ್ರೀಪರ್ವ



ಪ್ರಕಾಶಕರು :

ತತ್ವಸಂಶೋಧನಸಂಸತ್ (ರಿ.)

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ

ಶ್ರೀಪಲಿಮಾರು ಮಠ, ಉಡುಪಿ.

॥ ಶ್ರೀರಾಮಶ್ರೀ ॥

॥ ಶ್ರೀವೇದವ್ಯಾಸೋ ವಿಜಯತೇ ॥

ಭಗವಾನ್ ಶ್ರೀವೇದವ್ಯಾಸ ಪ್ರಣೀತ

# ಮಹಾಭಾರತ

## ಭಾಗ-೨೩

# ಗದಾಪರ್ವ, ಸೌಪ್ತಿಕಪರ್ವ ಮತ್ತು ಸ್ತ್ರೀಪರ್ವ

ಸಮಗ್ರ ಶ್ಲೋಕಗಳ ಕನ್ನಡಾನುವಾದ

(ಶ್ರೀಮದಾನಂದತೀರ್ಥರ ತಾತ್ಪರ್ಯನಿರ್ಣಯ ಶ್ರೀವಾದಿರಾಜಗುರುಸಾರ್ವಭೌಮರ ಲಕ್ಷಾಲಂಕಾರದೊಂದಿಗೆ)

ಅನುಗ್ರಹ :

**ಪರಮಪೂಜ್ಯ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದರು**

ಶ್ರೀಹೃಷೀಕೇಶತೀರ್ಥಸಂಸ್ಥಾನಂ, ಪಲಿಮಾರು ಮಠ, ಉಡುಪಿ

ಅನುವಾದಕರು :

ವಿದ್ವಾನ್ ಬಿದರಹಳ್ಳಿ ಕೃಷ್ಣಾಚಾರ್ಯ



ತತ್ವಸಂಶೋಧನಸಂಸತ್ (ರಿ.)

ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ

ಶ್ರೀಪಲಿಮಾರು ಮಠ, ಉಡುಪಿ.

ಮಹಾಭಾರತ ಗದಾಪರ್ವ, ಸೌಪ್ತಿಕಪರ್ವ ಮತ್ತು ಸ್ತ್ರೀಪರ್ವ-ಭಾರತತಾತ್ಪರ್ಯನಿರ್ಣಯ-ಲಕ್ಷಾಲಂಕಾರ ಕನ್ನಡಾನುವಾದದ ಸಮಗ್ರ ಯೋಜನೆಯ ಈ ಕೃತಿಯು ತ್ರೈಲೋಕ್ಯಾಚಾರ್ಯ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಪ್ರತಿಷ್ಠಿತನಾದ ಉಡುಪಿ ಶ್ರೀಕೃಷ್ಣನ ಸನ್ನಿಧಾನದಲ್ಲಿ ಪರಮಪೂಜ್ಯ ಶ್ರೀ ಶ್ರೀವಿದ್ಯಾಧೀಶತೀರ್ಥ ಶ್ರೀಪಾದರ ದ್ವಿತೀಯ ಪರ್ಯಾಯದ ಶುಭಸಂದರ್ಭದಲ್ಲಿ ಅನೇಕ ಪೀಠಾಧಿಪತಿಗಳ ಮತ್ತು ಸಾಧಕರ ಸಮಕ್ಷಮದಲ್ಲಿ ಅನಾವರಣಗೊಂಡಿತು.

## ಗದಾಪರ್ವ, ಸೌಪ್ತಿಕಪರ್ವ ಮತ್ತು ಸ್ತ್ರೀಪರ್ವ - ಭಾಗ ೨೩



ISBN : 978-93-88813-01-3

ಈ ಗ್ರಂಥವು ಕರ್ನಾಟಕ ಸರ್ಕಾರದ ಆರ್ಥಿಕ ನೆರವಿನಿಂದ ಮುದ್ರಿತವಾಗಿದೆ

ಪುಟಗಳು - XXXVI + 583 = 619

ಮುದ್ರಿತ ಪ್ರತಿಗಳು - 1000

ಬೆಲೆ - ರೂ. 425/-

ಅನುವಾದಕರು - ವಿದ್ವಾನ್ ಬಿದರಹಳ್ಳಿ ಕೃಷ್ಣಾಚಾರ್ಯ

ಪ್ರಕಾಶಕರು - ತತ್ವಸಂಶೋಧನಸಂಸತ್, ಪಲಿಮಾರು ಮಠ, ಉಡುಪಿ.

ಪುಟ ಸಂಯೋಜನೆ ಮತ್ತು - ಸಂಸ್ಕೃತ ಶ್ಲೋಕ ಲಿಪ್ಯಂತರ ಎಂ. ಶರತ್ ಚಂದ್ರ, ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್ ಮೈಸೂರು. ಮೊ : 7899779255

ಅಕ್ಷರ ಜೋಡಣೆ - ವಿದ್ವಾನ್ ಬಿದರಹಳ್ಳಿ ಕೃಷ್ಣಾಚಾರ್ಯ

ಮುದ್ರಕರು - ಪವನ್ ಪ್ರಿಂಟರ್ಸ್, ಬೆಂಗಳೂರು.

ಗ್ರಂಥಪ್ರಾಪ್ತಿ - ಪಲಿಮಾರು ಮಠ, ಉಡುಪಿ.



ನವನವಗುಣಸಾಂದ್ರಂ ನೌಮಿ ಮಧ್ವಾಖ್ಯಚಂದ್ರಮ್

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನಮ್

## ಪರಮಪೂಜ್ಯ ಶ್ರೀಶ್ರೀವಿದ್ಯಾಧೀಶತೀರ್ಥ ಶ್ರೀಪಾದರು

ಶ್ರೀ ಹೃಷೀಕೇಶತೀರ್ಥ ಸಂಸ್ಥಾನಮ್, ಶ್ರೀಪಲಿಮಾರು ಮಠ, ಉಡುಪಿ.

---

# ಅನುಗ್ರಹ ಸಂದೇಶ

ಅಶ್ವತ್ಥಾಮರಿಂದ ಉಪಪಾಂಡವರ ಸಂಹಾರ. ಧೃಷ್ಟದ್ಯುಮ್ನನ ವಧೆ, ದುರ್ಯೋಧನನ ಮರಣ, ಅಶ್ವತ್ಥಾಮರಿಂದ 'ಬ್ರಹ್ಮಶಿರೋಸ್ತ್ರ ಪ್ರಯೋಗ, ಅಶ್ವತ್ಥಾಮರಿಗೆ ಶ್ರೀಕೃಷ್ಣನ ಶಾಪ. ಇಷ್ಟು ಸೌಪ್ತಿಕ ಪರ್ವದ ಪ್ರಮುಖ ಘಟ್ಟಗಳು.

ತೊಡೆ ಮುರಿದು ಬಿದ್ದ ದುರ್ಯೋಧನನು ಪಾಂಡವರ ಸಂಹಾರಕ್ಕಾಗಿ ಅಶ್ವತ್ಥಾಮರಿಗೆ ವರಣೆ ಕೊಡುತ್ತಾನೆ. ಅಂದುರಾತ್ರಿ ಭೀಮಾರ್ಜುನರಿಗೆ ಹೆದರಿ ಕೃಪ-ಕೃತವರ್ಮ- ಅಶ್ವತ್ಥಾಮರು ಗೊಂಡಾರಣ್ಯಕ್ಕೆ ಪ್ರವೇಶಿಸುತ್ತಾರೆ. ಅಲ್ಲಿ ನಿದ್ರೆ ಬಾರದೆ ಚಿಂತಿಸುತ್ತಾ ಕುಳಿತಿರುವ ಅಶ್ವತ್ಥಾಮರಿಗೆ ರಾತ್ರಿಕಾಲದಲ್ಲಿ ಗೂಬೆಯೊಂದು ಸಾವಿರಾರು ಕಾಗೆಗಳನ್ನು ಸಂಹರಿಸುತ್ತಿರುವ ದೃಶ್ಯವು ಕಾಣಿಸುತ್ತದೆ. ಅಶ್ವತ್ಥಾಮರು ಇದು ಭಗವಂತನೇ ನೀಡಿದ ಪ್ರೇರಣೆ ಎಂದು ಪಾಂಡುಪುತ್ರರನ್ನು ಸಂಹರಿಸಲು ಹೊರಡುತ್ತಾರೆ. ಪಾಂಡವರ ಶಿಬಿರದ ದ್ವಾರದಲ್ಲಿ ಶಿವನು ರಕ್ಷಕನಾಗಿ ನಿಂತಿರುವುದನ್ನು ಅವನ ಸುತ್ತಲೂ ಕೋಟಿ ರೂಪಗಳಿಂದ ನಿಂತಿರುವ ವಾಸುದೇವನನ್ನೂ ಕಾಣುತ್ತಾನೆ. ಭಯಗೊಂಡ ಅಶ್ವತ್ಥಾಮಾ ಮಾನಸಯಜ್ಞವನ್ನು ಆಚರಿಸಿ ಶ್ರೀಹರಿಯನ್ನು ಸಂತೋಷಗೊಳಿಸಿ ಶಿವನ ಮೂಲಕ ಆಯುಧಗಳನ್ನು ಉಪಪಾಂಡವರ ವಧೆಗಾಗಿ ಸ್ವೀಕರಿಸುತ್ತಾನೆ.

ಯುದ್ಧದಲ್ಲಿ ನಡೆಯುವ ವಧೆ ಶ್ರೀಹರಿಯ ಪೂಜೆ ಎಂಬ ಅನುಸಂಧಾನವಿದ್ದಾಗ ದೇವರೇ ಆ ವಧೆಗೆ ಸಹಕಾರ ನೀಡುತ್ತಾನೆ. ಉಪಪಾಂಡವರ ವಧೆಯು ಭಗವತ್ಸಂಕಲ್ಪವೆಂದೇ ಭಾವಿಸಬೇಕು. ಶಿವನಲ್ಲಿ ನಿಂತು ಸಂಹಾರಗೈವ ಶಕ್ತಿಯೂ ವಿಷ್ಣುವಿನದ್ದೇ ಎಂಬುದಕ್ಕೆ ನಿದರ್ಶನ ಉಪಪಾಂಡವರ ವಧೆ. ಆದರೆ ಅಶ್ವತ್ಥಾಮರು ಇಲ್ಲಿಗೆ ಮುಗಿಸದೆ ಸಮಸ್ತ ಪಾಂಡವರ ಸಂಹಾರಕ್ಕಾಗಿ ಬ್ರಹ್ಮಶಿರೋಸ್ತ್ರವನ್ನು ಪ್ರಯೋಗಿಸುತ್ತಾರೆ. ಮುಂದೆ ವ್ಯಾಸರು ಬಂದು ಬುದ್ಧಿವಾದ ಹೇಳುತ್ತಾರೆ. ಇಷ್ಟಾದರೂ ಅಶ್ವತ್ಥಾಮರು ಬ್ರಹ್ಮಶಿರೋಸ್ತ್ರವನ್ನು ಉತ್ತರೆಯ ಗರ್ಭಕ್ಕೆ ಪ್ರಯೋಗಿಸುತ್ತಾರೆ. ಕೃಷ್ಣನು ಅಸ್ತ್ರವನ್ನು ಹಿಂತೆಗೆದುಕೊ ಎಂದಾಗ ಅಶ್ವತ್ಥಾಮರು ಕೃಷ್ಣನನ್ನು 'ನಿನಗೆ ತಂಗಿಮಗನ ಸಂತತಿಯಲ್ಲಿ ಮೋಹ' ಎಂದು ಹಂಗಿಸುತ್ತಾರೆ. ಈ ಪ್ರಸಂಗದಲ್ಲಿ ಕೃಷ್ಣನು ಸಿಟ್ಟಾಗುತ್ತಾನೆ.

**'ಪಶ್ಯ ಮೇ ದುರ್ಮತೇ ವೀರ್ಯಂ ಯತ್ತೇ ಶಕ್ಯಂ ಕುರುಷ್ವತತ್'** ಎಂದು ಘರ್ಜಿಸುತ್ತಾನೆ. ಅಶ್ವತ್ಥಾಮರನ್ನು ಉಗ್ರವಾಗಿ ಶಪಿಸುತ್ತಾನೆ, ದೇವರು ಶಪಿಸಿದ ಎಂಬ ಅಪರೂಪದ ಪ್ರಸಂಗವಿಲ್ಲಿದೆ. ಕೃಷ್ಣರೂಪದ ಶಾಪವನ್ನು ವ್ಯಾಸರೂಪದಿಂದಲೂ ಅನುಮೋದಿಸುತ್ತಾರೆ. ಎಂದೂ ಲಿಪ್ತನಾಗದಿರುವ ವ್ಯಕ್ತಿತ್ವ. ಅಶ್ವತ್ಥಾಮರಂತಹ ಜ್ಞಾನಿಗಳಿಗೂ ಕಲಿ ಸಮಾಗಮದ ಪ್ರಖರತೆ ಇಷ್ಟು ಘನವಾಗಿದೆ ಎಂದರೆ ನಮ್ಮಂಥವರ ಪಾಡೇನು? ಕಲಿ ಬಾಧೆಯನ್ನು ಶ್ರೀಹರಿಯ ಅನುಗ್ರಹದಿಂದಲೇ ದಾಟಬೇಕೇ ವಿನಾ ಬೇರೆ ಯಾವ ಉಪಾಯವೂ ಇಲ್ಲ ಎಂಬುದನ್ನು ಇಂತಹ ಪ್ರಸಂಗಗಳಿಂದ ಅರ್ಥೈಸಿಕೊಳ್ಳಬೇಕು. ಈ ಕಲಿಬಾಧೆಗೆ ಎಂದೂ ಆಪ್ತವಾಗದಿರುವ ವೈರತ್ವ ಭೀಮಸೇನನದ್ದು. ಅಂತಹ ಭೀಮನ ಅಪರ ಅವತಾರರಾದ ಶ್ರೀಮದಾಚಾರ್ಯರ ತತ್ವವಾದದ ಕಂಪಿನಲ್ಲಿ ಜೀವನ ಸಾಗಿಸಿದಾಗ ಕಲಿಯ ಕಂಪನಕ್ಕೆ ನಾವು ತುತ್ತಾಗೆವು. ಇಲ್ಲವಾದಲ್ಲಿ ಕಲಿಯ ಬಾಧೆ ತಪ್ಪಿದ್ದಲ್ಲ. ಕಲಿಯ ಕಾರ್ಯವನ್ನು ಹತ್ತಿಕ್ಕಿ ಕೃಷ್ಣನ ಅನುಗ್ರಹದಿಂದ ಕಲಿಯನ್ನು ನಿಗ್ರಹಿಸಿದ ಅಪ್ರತಿಮ ವೀರ ಭೀಮಸೇನ. ಕಲಿಯುಗದಲ್ಲಿ ವಾಸಿಸುತ್ತಿರುವ ನಮಗೆ ಭೀಮನ ಅನುಗ್ರಹ ಬಹಳ ಬೇಕು. ಇದಕ್ಕಾಗಿ ಕಲಿಯನ್ನು ನಿಗ್ರಹಿಸಿದ ಮಹಾಭಾರತದ ಕಥೆಯನ್ನು ಓದಬೇಕು.

ಇಂತಹ ಪ್ರಸಂಗಗಳನ್ನು ವ್ಯಾಸರ ಮಾತಿಗೆ ಚ್ಯುತಿಬಾರದಂತೆ ಅಂದವಾಗಿ ಅನುವಾದಿಸಿಕೊಟ್ಟವರು ನಮ್ಮವರೇ ಆದ ವಿದ್ವಾನ್ ಬಿದರಹಳ್ಳಿ ಕೃಷ್ಣಾಚಾರ್ಯರು. ಶ್ರೀಮದಾಚಾರ್ಯರ ಸೇವೆಯನ್ನು ಪಾಜಕ ಕ್ಷೇತ್ರದಲ್ಲಿ ವಿಶೇಷವಾಗಿ ಮಾಡಿದ ಕಾರಣದಿಂದಲೇ ಕಲಿಯನ್ನು ನಿಗ್ರಹಿಸಿದ ಪ್ರಸಂಗವನ್ನು ಅನುವಾದಿಸಲು ಇವರಿಗೆ ಪ್ರಸಂಗ ಒದಗಿ ಬಂದಿದೆ ಎಂದು ಭಾವಿಸುತ್ತೇವೆ. ಸದಾಚಾರ ಸಂಪನ್ನರು-ವಿಮರ್ಶಕರು-ವಿದ್ವಾಂಸರೂ ಆದ ಇವರಿಂದ ಅನೇಕ ಮುಖದ ಜ್ಞಾನಕಾರ್ಯಗಳು ನಡೆಯಲೆಂದು ಶ್ರೀಕೃಷ್ಣ-ಮುಖ್ಯಪ್ರಾಣರಲ್ಲಿ ಪ್ರಾರ್ಥಿಸುತ್ತೇವೆ.

ನಾರಾಯಣ ಸ್ಮರಣೆಗಳು
ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರು
ಶ್ರೀ ಪಲಿಮಾರು ಹೃಷೀಕೇಶ ಮಠ, ಉಡುಪಿ.

# ಪ್ರಕಾಶಕರ ನುಡಿ

ಮಹಾಭಾರತದಲ್ಲಿ ಸೌಪ್ತಿಕ, ಸ್ತ್ರೀಪರ್ವಗಳು ಮಹತ್ವಪೂರ್ಣವಾದವುಗಳು. ಮಾರ್ಗಶಿರ ಶುದ್ಧ ತ್ರಯೋದಶಿಯಿಂದ ಆರಂಭಗೊಂಡ ಮಹಾಭಾರತ ಯುದ್ಧವು ಮಾರ್ಗಶಿರ ಬಹುಳ ಅಮಾವಾಸ್ಯೆಯಂದು ದುರ್ಯೋಧನನ ಸಂಹಾರದಲ್ಲಿ ಉಪಸಂಹಾರ ಹೊಂದಿತು. ಇಂತಹ ದುರ್ಯೋಧನನ ಮರಣದ ಕೊನೆಯ ಘಟನೆಗಳನ್ನು ನಿರೂಪಿಸುವ ಪರ್ವ ಸೌಪ್ತಿಕ ಪರ್ವ. ರಣರಂಗದಲ್ಲಿ ಹತನಾಗಿ ಬಿದ್ದ ದುರ್ಯೋಧನನು ಮರಳಿನಿಂದಲೇ ಅಶ್ವತ್ಥಾಮಾಚಾರ್ಯರಿಗೆ ತನ್ನ ರಾಜ್ಯದಲ್ಲಿ ಪಟ್ಟಾಭಿಷೇಕಗೈಯ್ಯುತ್ತಾನೆ. ಕೌರವರ ಪ್ರೀತಿಗಾಗಿ ಅಶ್ವತ್ಥಾಮಾಚಾರ್ಯರು ಉಪಪಾಂಡವ ವಧೆಯ ಸಂಕಲ್ಪವನ್ನು ಮಾಡುತ್ತಾರೆ. ರುದ್ರದೇವರ ಅನುಗ್ರಹದಿಂದ ಭಗವತ್ಸಂಕಲ್ಪವನ್ನನುಸರಿಸಿ ಉಪಪಾಂಡವರನ್ನು ವಧೆಗೈದ ಅಶ್ವತ್ಥಾಮರು ಕೌರವನಿಗೆ ಮೃತಪುತ್ರರ ಬಿಸಿ ರಕ್ತದಿಂದ ತಣಿಸಿ ಸುಖದಿಂದ ಅವನು ಪ್ರಾಣತೆತ್ತುವಂತೆ ಸಹಕರಿಸುತ್ತಾರೆ. ತಾನು ಸತ್ಕರ್ಮವನ್ನೇ ಮಾಡಿ ಸಾಯುತ್ತಿದ್ದೇನೆ ಎಂದು ಭಾವಿಸುತ್ತಾ ಮರಣೋನ್ಮುಖನಾದ ಕೌರವನು ಪಾಂಡವರಿಗೆ, ಜಗತ್ತಿಗೆ ಅನ್ಯಾಯ ಮಾಡಿದ ಮಹಾಪರಾಧದಿಂದ ಮುಂದೆ ಅಂಧಂತಮಸ್ಸನ್ನೇ ಪ್ರವೇಶಿಸುತ್ತಾನೆ.

ಇತ್ತ ಉಪಪಾಂಡವ ವಧೆಯಿಂದ ಕ್ರುದ್ಧನಾದ ಭೀಮನು ದ್ರೌಣಿಯನ್ನು ಹಣಿಯಲು ಹವಣಿಸುತ್ತಾನೆ. ಕೃಷ್ಣನು ಅವನನ್ನು ಸಮಾಧಾನ ಪಡಿಸುತ್ತಾನೆ. ಇಷ್ಟಾದರೂ ಕೌರವನ ಮೇಲಿನ ಮೋಹದಿಂದ ಕ್ರುದ್ಧನಾದ ದ್ರೌಣಿಯು ಅಪಾಂಡವ ಹೇತುವಿನಿಂದ ಬ್ರಹ್ಮಶಿರೋಸ್ತ್ರವನ್ನೇ ಪ್ರಯೋಗಿಸುತ್ತಾನೆ. ಇದಕ್ಕೆ ಪ್ರತಿಯಾಗಿ ಕೃಷ್ಣನ ಆಜ್ಞೆಯಿಂದ ಬ್ರಹ್ಮಶಿರೋಸ್ತ್ರವನ್ನು ಪ್ರಯೋಗಿಸುತ್ತಾನೆ. ಈ ಉಲ್ಬಣವಾದ ಅಸ್ತ್ರಗಳಿಂದ ಜಗತ್ತೇ

ಕ್ಷಯವಾಗುವ ಸ್ಥಿತಿ ಮುಟ್ಟಿದಾಗ ವ್ಯಾಸರು ಬಂದು ಅಸ್ತ್ರೋಪಸಂಹಾರಕ್ಕೆ ಆದೇಶಿಸುತ್ತಾರೆ. ಆದರೆ ನೈಷ್ಠಿಕ ಬ್ರಹ್ಮಚರ್ಯದಿಂದ ವಂಚಿತನಾದ ಅಶ್ವತ್ಥಾಮರು ಬ್ರಹ್ಮಶಿರೋಸ್ತ್ರವನ್ನು ಉಪಸಂಹರಿಸಲು ಅಸಮರ್ಥರಾದಾಗ ಪ್ರಾಜಾಪತ್ಯ ಬ್ರಹ್ಮಚರ್ಯದಲ್ಲಿ ನಿರತನಾದ ಅರ್ಜುನನು ಅಶ್ವತ್ಥಾಮರ ಬ್ರಹ್ಮಾಸ್ತ್ರವನ್ನು ತಾನೇ ಉಪಸಂಹರಿಸುತ್ತಾನೆ. ಇಷ್ಟಾದರೂ ಅಶ್ವತ್ಥಾಮರ ಕ್ರೌರ್ಯ ಮುಕ್ತಾಯವಾಗುವುದಿಲ್ಲ. ಉತ್ತರೆಯ ಗರ್ಭದಲ್ಲಿರುವ ಶಿಶುವಿನ ಮೇಲೆ ಬ್ರಹ್ಮಶಿರೋಸ್ತ್ರವನ್ನು ಪ್ರಯೋಗಿಸುತ್ತಾರೆ. ಇಂತಹ ಸ್ಥಿತಿಯಲ್ಲಿ ಉತ್ತರೆಯು ಕೃಷ್ಣನಲ್ಲಿ ಪ್ರಾರ್ಥಿಸಿದಾಗ ಕೃಷ್ಣನು ಆ ಶಿಶುವನ್ನು ರಕ್ಷಿಸುತ್ತಾನೆ. ಅಶ್ವತ್ಥಾಮರನ್ನು ಹೆಡೆಮುರಿ ಕಟ್ಟಿದ ಭೀಮಸೇನನು ಅವನ ಶಿರೋಮಣಿಯನ್ನು ಅಪಹರಿಸುತ್ತಾನೆ. ಈ ಎಲ್ಲ ಸ್ಥಿತಿಗಳನ್ನು ಕೇಳಿಸಿಕೊಂಡು ದುಃಖಿತಪ್ತನಾದ ಧೃತರಾಷ್ಟ್ರನಿಗೆ ವಿದುರ ಸಂಜಯರು ಸಾಂತ್ವನ ಹೇಳುತ್ತಾರೆ. ಹೀಗೆ ಸ್ತ್ರೀಪರ್ವವು ಮುಂದುವರೆಯುತ್ತದೆ.

ಮೃತಪುತ್ರರನ್ನೆಲ್ಲ ನೋಡಬೇಕೆಂದು ಧೃತರಾಷ್ಟ್ರನು ಕುರುಭೂಮಿಗೆ ಸಾಗುತ್ತಾನೆ. ಎಲ್ಲರೂ ಭೀಮನ ಪರಾಕ್ರಮದಿಂದಲೇ ಹತರಾಗಿದ್ದಾರೆಂದು ಭೀಮನನ್ನೇ ಸಂಹರಿಸಲು ಹವಣಿಸುತ್ತಾನೆ. ಈ ಪ್ರಸಂಗದಲ್ಲಿ ಕೃಷ್ಣನು ಉಕ್ಕಿನ ಪ್ರತಿಮೆಯನ್ನು ತಳ್ಳಿ ಧೃತರಾಷ್ಟ್ರನ ಕ್ರೌರ್ಯವೇನೆಂಬುದನ್ನು ತೋರಿಸುತ್ತಾನೆ. ಮುಂದೆ ಗಾಂಧಾರಿಯು ಕೃಷ್ಣನ ಮೇಲೆ ಕ್ರುದ್ಧಳಾಗಿ ಸಮಸ್ತ ಯಾದವ ಕುಲದ ಸಂಹಾರ ಶಾಪವನ್ನು ನೀಡುತ್ತಾಳೆ. ಗಾಂಧಾರಿಯ ಕ್ರೋಧವನ್ನು ವ್ಯಾಸರು ಉಪಶಮನ ಮಾಡುತ್ತಾಳೆ. ಇದರಿಂದ ಅತಿಯಾಗಿ ಸಂಪಾದಿಸಿದ ತನ್ನ ಪಾತಿವ್ರತ್ಯದ ಫಲವನ್ನು ಗಾಂಧಾರಿಯು ಕೃಷ್ಣ ಶಾಪದಿಂದ ಕಳೆದು-ಕೊಳ್ಳುವಂತಾಗುತ್ತದೆ. ಸತ್ತವರಿಗೆಲ್ಲ ಉದಕಾಂಜಲಿಗಳನ್ನು ನೀಡಿ ಸಮಾಧಾನವನ್ನು ಹೊಂದುವಂತಹ ಪ್ರಸಂಗವು ಸ್ತ್ರೀಪರ್ವದಲ್ಲಿ ಮೂಡಿ ಬಂದಿದೆ.

ಪ್ರಾತಃಸ್ಮರಣೀಯರಾದ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರ ಪರಮಾನುಗ್ರಹದಿಂದ ಶ್ರೀಮನ್ಮಹಾಭಾರತದ ಶುದ್ಧಪಾಠದ ಮುದ್ರಣವೆಂಬ ಮಹತ್ಕಾರ್ಯವನ್ನು ಕೈಗೆತ್ತಿಕೊಂಡು, ಅದಕ್ಕೆ ಸಂಬಂಧಪಟ್ಟ ವಿದ್ವಾಂಸರನ್ನು ಒಟ್ಟುಗೂಡಿಸಿ, ಪ್ರಾಚೀನ ಹಸ್ತಪ್ರತಿಗಳ ಸಂಶೋಧನೆಯನ್ನು ಮಾಡಿಸಿ, ಆಧ್ಯಾತ್ಮಿಕ ಹಾಗೂ ಸಾಮಾಜಿಕ ಸಮಾಜಕ್ಕೆ ದೊಡ್ಡ ಕೊಡುಗೆಯನ್ನು ನೀಡುತ್ತಿದ್ದಾರೆ ನಮ್ಮ ಗುರುಗಳಾದ ಶ್ರೀ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದರು. ಆ ನಿಟ್ಟಿನಲ್ಲಿ ಈಗ ಸೌಪ್ತಿಕ, ಸ್ತ್ರೀ ಪರ್ವದ ಭಾಗವನ್ನು ಅರ್ಥಸಹಿತ ಒಂದು ಸಂಪುಟಗಳಲ್ಲಿ ಲೋಕಾರ್ಪಣೆ ಮಾಡುತ್ತಿದ್ದೇವೆ. ಪ್ರಾತಃಸ್ಮರಣೀಯರಾದ ಪರಮಪೂಜ್ಯ

ಶ್ರೀ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರ ಮಹತ್ಸಂಕಲ್ಪವಾದ ಶ್ರೀಮಹಾಭಾರತ ಮುದ್ರಣವು ಅವರೇ ಹುಟ್ಟುಹಾಕಿದ ತತ್ತ್ವಸಂಶೋಧನ ಸಂಸತ್ತಿನಿಂದ ಆಗಬೇಕೆಂದು ಶ್ರೀಪಾದರು ಸಂಕಲ್ಪಿಸಿದ್ದಾರೆ. ಅದು ಕೂಡ ಶ್ರೀಪಾದರ ದ್ವಿತೀಯ ಶ್ರೀಕೃಷ್ಣಪೂಜಾ ಪರ್ಯಾಯದ ಶುಭಾವಸರದಲ್ಲಿ ಬಿಡುಗಡೆಗೊಳ್ಳುತ್ತಿರುವುದು ಯೋಗವೇ ಸರಿ. ಈ ನಮ್ಮ ಸಂಸ್ಥೆಯ ಎಲ್ಲಾ ವಿಷಯಗಳಲ್ಲಿ ತಮ್ಮ ಸಂಪೂರ್ಣ ಅನುಗ್ರಹವನ್ನು ಧಾರೆಯೆರೆದ ನಮ್ಮ ಸಂಸ್ಥೆಯ ಕುಲಪತಿಗಳಾದ ಶ್ರೀ ಶ್ರೀ ವಿದ್ಯಾಧೀಶ ತೀರ್ಥ ಶ್ರೀಪಾದರಿಗೆ ಹೃತ್ಪೂರ್ವಕ ಅನಂತ ನಮೋವಾಕ್ಕುಗಳನ್ನು ಸಮರ್ಪಿಸುತ್ತಿದ್ದೇನೆ.

ಸೌಪ್ತಿಕ ಪರ್ವದ ಆರಂಭದ ಕೆಲವು ಅಧ್ಯಾಯಗಳನ್ನು ಅನುವಾದಿಸಿಕೊಟ್ಟ ಅದಮಾರು ಕಿರಿಯಪಟ್ಟ ಪರಮಪೂಜ್ಯ ಶ್ರೀ ಶ್ರೀ ಈಶಪ್ರಿಯತೀರ್ಥ ಶ್ರೀಪಾದರನ್ನು ಕೃತಜ್ಞತಾ ಪೂರ್ವಕ ವಂದಿಸುತ್ತೇವೆ.

ಸೌಪ್ತಿಕ, ಐಷಿಕ, ಸ್ತ್ರೀ ವಿಲಾಪ, ಶ್ರಾದ್ಧಪರ್ವಗಳ ಅನುವಾದವನ್ನು ಸುಂದರವಾಗಿ ಮಾಡಿಕೊಟ್ಟ ವಿದ್ವಾನ್ ಬಿದರಹಳ್ಳಿ ಕೃಷ್ಣಾಚಾರ್ಯರನ್ನು ತತ್ತ್ವಸಂಶೋಧನ ಸಂಸತ್‌ನ ವತಿಯಿಂದ ವಿಶೇಷವಾಗಿ ಕೃತಜ್ಞತಾ ಪೂರ್ವಕವಾಗಿ ಅಭಿನಂದಿಸುತ್ತೇವೆ.

ಅದೇ ರೀತಿಯಲ್ಲಿ ಇಂತಹ ಅದ್ಭುತವಾದ ಈ ಕೃತಿ ಹೊರಬರಲು ಆರ್ಥಿಕವಾಗಿ ಎಲ್ಲ ರೀತಿಯ ಸಹಕಾರ ನೀಡಿರುವಂತಹ ನಮ್ಮ ಘನವೆತ್ತ ಕರ್ನಾಟಕ ಸರ್ಕಾರಕ್ಕೆ, ಅದರ ಎಲ್ಲ ಪದಾಧಿಕಾರಿಗಳಿಗೆ ಸಂಶೋಧನ ಸಂಸತ್‌ನ ಪರವಾಗಿ ಹೃತ್ಪೂರ್ವಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಅದೇ ರೀತಿಯಲ್ಲಿ ಈ ಶ್ರೀಮಹಾಭಾರತ ಶುದ್ಧಪಾಠದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು , ಸಮರ್ಥವಾಗಿ ಆ ಯೋಜನೆ ಕಾರ್ಯಗತ ಆಗುವಲ್ಲಿ ಪೂರ್ಣಪ್ರಮಾಣದಲ್ಲಿ ಶ್ರಮಿಸುತ್ತಿರುವ ನಮ್ಮ ನಾಡಿನ ಖ್ಯಾತ ಪ್ರವಚನಕಾರರೂ, ವಿದ್ವಾಂಸರೂ ಆಗಿರುವಂತಹ ಡಾ।। ಬೆ.ನಾ. ವಿಜಯೀಂದ್ರಾಚಾರ್ಯರಿಗೆ ಮತ್ತು ಇದಕ್ಕಾಗಿ ಶ್ರಮವಹಿಸಿದ ಎಲ್ಲಾ ವಿದ್ವನ್ಮಣಿಗಳಿಗೆ ಸಂಸ್ಥೆಯ ಪರವಾಗಿ ಧನ್ಯವಾದಗಳು.

ಶ್ರೀಮಹಾಭಾರತದ ಮುದ್ರಣದ ಬೃಹತ್ ಯೋಜನೆಯಲ್ಲಿ ಈ ಇಳಿ ವಯಸ್ಸಿನಲ್ಲಿಯೂ ನಮ್ಮ ಜೊತೆಗೇ ಇದ್ದುಕೊಂಡು ಸಂಪೂರ್ಣ ಸಹಕಾರವನ್ನು

ನೀಡುತ್ತಿರುವ ಶ್ರೀಯುತ ರಘುಪತಿ ತಂತ್ರಿ ಇವರಿಗೂ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಧನ್ಯವಾದಗಳು. ಮೂಲ ಸಂಸ್ಕೃತ ಶ್ಲೋಕಗಳನ್ನು ದೋಷರಹಿತವಾಗಿ ಕನ್ನಡಕ್ಕೆ ಲಿಪ್ಯಂತರವನ್ನು ಮಾಡಿಕೊಟ್ಟು ಹಾಗೂ ಪುಟ ಸಂಯೋಜನೆಯನ್ನು ಮಾಡಿದ ಶ್ರೀಯುತ ಶರತ್‌ಚಂದ್ರ ಎಂ., ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್ ಅವರಿಗೂ ಸಂಸ್ಥೆಯ ಪರವಾಗಿ ಧನ್ಯವಾದಗಳು. ಹಾಗೆಯೇ ತಿದ್ದುಪಡಿಯಲ್ಲಿ ಸಹಕಾರ ಮಾಡಿಕೊಟ್ಟಿರುವ ಶ್ರೀಯುತ ಶ್ರೀವತ್ಸ ಆಚಾರ್ಯ (ಸಿದ್ಧಾಂತಿ) ಇವರಿಗೂ ಧನ್ಯವಾದಗಳು. ಹಾಗೆಯೇ ನಮಗೆ ಬೇಕಾದ ಕ್ಲೃಪ್ತ ಸಮಯದಲ್ಲಿ ಸುಂದರವಾಗಿ ಮುದ್ರಣವನ್ನು ಮಾಡಿಕೊಟ್ಟಿರುವ ಪವನ್ ಪ್ರಿಂಟರ್ಸ್‌ನ ಮಂಜುನಾಥ್‌ರವರಿಗೂ ನಮ್ಮ ಸಂಸ್ಥೆಯ ಪರವಾಗಿ ವಿಶೇಷ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇವೆ. ಈ ಕಾರ್ಯದಲ್ಲಿ ಶ್ರಮಿಸಿದ ಸಂಶೋಧನ ಮಂದಿರದ ಎಲ್ಲಾ ಕಾರ್ಯಕಾರಿಣಿ ವರ್ಗಕ್ಕೂ ಈ ಮೂಲಕ ಧನ್ಯವಾದಗಳನ್ನು ಸಮರ್ಪಿಸುತ್ತಿದ್ದೇನೆ.

ಈ ಸೌಪ್ತಿಕ, ಸ್ತ್ರೀ ಪರ್ವದ ಅಧ್ಯಯನವನ್ನು ಮಾಡಿ ತನ್ಮೂಲಕ ಸಾಧನೆ ಮಾರ್ಗವನ್ನು ನಾವು ನಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಭಗವಂತನನ್ನು ಒಲಿಸಿಕೊಳ್ಳುವುದರ ಬಗ್ಗೆ ಅವನ ಸಂಕಲ್ಪಕ್ಕೆ ಅನುಗುಣವಾಗಿ ಅವನ ಪ್ರೇರಣೆಯಂತೆ ಎಲ್ಲರೂ ಕೈ ಜೋಡಿಸುವ ಮೂಲಕ ಶ್ರೀಕೃಷ್ಣನ ಕೃಪಾಕಟಾಕ್ಷಕ್ಕೆ ಪಾತ್ರರಾಗೋಣ ಎಂದು ಅಪೇಕ್ಷಿಸುತ್ತಿದ್ದೇನೆ.

ಪ್ರಕಾಶಕರು
ಡಾ. ವಂಶೀಕೃಷ್ಣಾಚಾರ್ಯ ಪುರೋಹಿತ್
ನಿರ್ದೇಶಕರು, ತತ್ತ್ವಸಂಶೋಧನಸಂಸತ್,
ಶ್ರೀ ಪಲಿಮಾರು ಹೃಷೀಕೇಶ ಮಠ, ಉಡುಪಿ.

# ಸಂಪುಟ ಪ್ರವೇಶಿಸುವ ಮುನ್ನ

ಶ್ರೀಮನ್‌ಮಹಾಭಾರತವು ವೀರರಸ ಪ್ರಧಾನವಾಗಿ ಕಂಡರೂ ಅದರ ಗುರಿ ಭಕ್ತಿರಸದ ಬೋಧನೆ. ವಸ್ತುತಃ ಎಲ್ಲ ರಸಗಳ ಸವಿಔತಣವನ್ನು ಉಣಬಯಸಿದಷ್ಟು ನೀಡುವ ಮಹಾಕಾವ್ಯವಿದು. ಬ್ರಹ್ಮದೇವನಿಂದಾರಂಭಿಸಿ ಪಂಕ್ತಿಯ ಕೊನೆಯಲ್ಲಿರುವ ವ್ಯಕ್ತಿಗೂ ಸಂತೃಪ್ತಿಯನ್ನು ನೀಡುವ ಅದ್ಭುತ ಕಾವ್ಯ. ಅದಕ್ಕೆಂದೆ 'ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್' (ಇಲ್ಲಿರುವುದೇ ಬೇರೆಡೆಯಲ್ಲಿ ಕಾಣುವೆವು, ಇಲ್ಲಿ ಇಲ್ಲದ್ದು ಇನ್ನೆಲ್ಲೂ ಸಿಗದು) ಎಂದುರು ಮಹಾಭಾರತವನ್ನು ಉಂಡ ಭಾವುಕರು. ನಮ್ಮ ಕನ್ನಡದ ಹಿರಿಯ ಕವಿ ಗದುಗಿನ ನಾರಾಯಣಪ್ಪರು ಹೀಗೆ ಉದ್ಗರಿಸಿರುವರು-

'ಅರಸು ಗಳಿಗೆ ಇದು ವೀರ
ದ್ವಿಜರಿಗೆ ಪರಮವೇದದ ಸಾರ
ಯೋಗೀಶ್ವರರ ತತ್ತ್ವವಿಚಾರ
ಮಂತ್ರಿ ಜನಕೆ ಬುದ್ಧಿಗುಣ
ವಿದ್ಯಾಪರಿಣತರ ಅಲಂಕಾರ
ಕಾವ್ಯಕೆ ಗುರು............' ಎಂದು.

## ಸೌಪ್ತಿಕಪರ್ವ

ಪಕೃತ ಸಂಪುಟದಲ್ಲಿ ಸೌಪ್ತಿಕ ಮತ್ತು ಸ್ತ್ರೀಪರ್ವಗಳು ಅನುವಾದಗೊಂಡಿವೆ.

ಭೀಭತ್ಸರಸದ ಪಾರಾಕಾಷ್ಠೆಯನ್ನು ಸೌಪ್ತಿಕಪರ್ವದಲ್ಲಿ ಕಾಣಬಹುದಾಗಿದೆ. ಹಾಗೆಯೇ ಕರುಣಾರಸದ ಪರಾಕಾಷ್ಠೆಯನ್ನು ಸ್ತ್ರೀಪರ್ವದಲ್ಲಿ ಕಾಣಬಹುದಾಗಿದೆ. ವಸ್ತುತಃ ಭೀಷ್ಮ, ದ್ರೋಣ ಮುಂತಾದ ಪರ್ವಗಳಲ್ಲಿ ಭೀಭತ್ಸವನ್ನು ಕಾಣಬಹುದಾಗಿದ್ದರೂ ಸೌಪ್ತಿಕದಲ್ಲಿ ಆ ರಸವು ವಿಶೇಷವಾಗಿ ಪ್ರಕಟವಾಗಿದೆ.

**ಅಶ್ವತ್ಥಾಮನಿಗೆ ಯುದ್ಧಕ್ಕೆ ಸ್ಫೂರ್ತಿ-**

ಯುದ್ಧಾನಂತರದಲ್ಲಿ ಕೌರವರ ಸೇನೆಯಲ್ಲಿ ಉಳಿದವರು ಮೂವರು, ಅಶ್ವತ್ಥಾಮ, ಕೃಪ ಮತ್ತು ಕೃತವರ್ಮ. ಈ ಮೂವರು ಸೋಲಿನ ಅಸಮಧಾನವನ್ನು ಒಡಲಲ್ಲಿ ತುಂಬಿಕೊಂಡು ಪಾಂಡವರಿಂದ ಭೀತರಾಗಿ ರಣರಂಗದಿಂದ ಹೊರ ನಡೆದರು. ಕಾಡಿನಲ್ಲಿ ಯಾರೂ ಸುಳಿಯದ ರಹಸ್ಯಸ್ಥಳದಲ್ಲಿ ದೊಡ್ಡ ಆಲದ ಮರದ ಬುಡದಲ್ಲಿ ಹುಲುಸಾಗಿ ಬೆಳೆದ ಪೊದೆಯ ನಡುವೆ ಅಡಗಿ ಕುಳಿತರು. ಅತ್ಯಂತವಾಗಿ ಬಳಲಿದ

ಅವರಲ್ಲಿ ಈರ್ವರು ನಿದ್ರೆಗೆ ಶರಣಾದರು. ಅತ್ಯಮರ್ಷಿಯಾದ ಪಾಂಡವರಿಗೆ ವಿಶೇಷವಾಗಿ ಪಾಂಚಾರಲಿಗೆ ಪ್ರತೀಕಾರ ಮಾಡಲು ಹವಣಿಸುತ್ತಿದ್ದ ಅಶ್ವತ್ಥಾಮನಿಗೆ ನಿದ್ರೆ ಬಾರಲಿಲ್ಲ. ಆಗ ಅಲ್ಲೊಂದು ಘಟನೆಯು ಜರುಗಿತು. ಇವರು ತಂಗಿದ್ದ ಆಲದ ಮರದಲ್ಲಿ ಸಾವಿರಾರು ಕಾಗೆಗಳು ಗೂಡು ಕಟ್ಟಿಕೊಂಡು ವಿಶ್ರಮಿಸುತ್ತಿದ್ದವು. ರಾತ್ರಿಯಲ್ಲಿ ಸಂಚರಿಸುವ ಗೂಗೆಯೊಂದು ಅಲ್ಲಿಗಾಗಮಿಸಿತು. ಆ ಗೂಗೆಯು ಅಲ್ಲಿರುವ ಎಲ್ಲ ಕಾಗೆಗಳನ್ನು ಕುಕ್ಕಿ ಕುಕ್ಕಿ ಸಂಹರಿಸಿತು. ಆ ಕಾಗೆಗಳ ಹಿಂಡು ಒಂಟಿ ಗೂಗೆಯಿಂದ ಸಾವನ್ನಪ್ಪಿತು. ಈ ಘಟನೆಯು ಅಶ್ವತ್ಥಾಮನಿಗೆ ಪಾಂಡವರ ಸೇನೆಯನ್ನು ಸೆದೆಬಡಿಯಲು ಸ್ಫೂರ್ತಿಯಾಯಿತು.

**ಪ್ರಪಂಚದಲ್ಲಿನ ಅತಿ ಕ್ರೂರ ಘಟನೆ-**

ಯುದ್ಧದಲ್ಲಿ ಹೋರಾಡಿ ಆಯಾಸಗೊಂಡ ಪಾಂಡವರ ಸೇನೆಯು ಮೈಮರೆತು ಮಲಗಿದೆ, ಈ ಸರಿರಾತ್ರಿಯಲ್ಲಿ ಆ ಶಿಬಿರಕ್ಕೆ ನುಗ್ಗಿ ಶತ್ರುಸೇನೆಯನ್ನು ಸದೆ ಬಡಿಯಲು ನನಗೆ ಇದು ಸೂಚಿಸುತ್ತಿದೆ' ಎಂದು ಭಾವಿಸಿದ ಅಶ್ವತ್ಥಾಮನು ಶಿಬಿರಕ್ಕೆ ನುಗ್ಗಿದ ತನ್ನ ಮನಸ್ಸಿಗೆ ತೋಚಿದಂತೆ ಮಲಗಿದ್ದ ಪಾಂಚಾಲರನ್ನು ಪಾಂಡವರ ಪುತ್ರರನ್ನು ಅಳಿದುಳಿದ ಸೇನೆಯನ್ನು ತರಿದನು. ರುದ್ರನರ್ತನದಿಂದ ಕುಣಿದನು. ಶಿಬಿರಕ್ಕೆ ಬೆಂಕಿಯಿಟ್ಟು ತನ್ನ ಒಳ ಕಿಚ್ಚನ್ನು ಹೊರಹಾಕಿದನು. ಆ ಯುದ್ಧದಲ್ಲಿ ಪಾಂಚಾಲರ ಧೃಷ್ಟದ್ಯುಮ್ನ, ಶಿಖಂಡಿ ಮುಂತಾದ ದ್ರೌಪದಿಯ ಸಹೋದರರು, ಪ್ರತಿವಿಂಧ್ಯ ಮೊದಲಾದ ದ್ರೌಪದಿಯ ಪುತ್ರರು, ಪಾಂಡವರ ಒಂದು ಅಕ್ಷೌಹಿಣಿ ಸೇನೆಯು, ಉಳಿದ ಗಜಪಡೆ, ಅಶ್ವಪಡೆ, ಪದಾತಿಗಳು, ರಥಿಕರು, ಸೇನಾಸಹಾಯಕರು, ಉಪಚಾರಕರು, ಪರಿಚಾರಕರು, ಸ್ತ್ರೀಯರು, ವೈದ್ಯರು, ಮಕ್ಕಳು ಹೀಗೆ ಅಪಾರ ಪ್ರಮಾಣದಲ್ಲಿ ಜೀವದ ಮತ್ತು ಆಸ್ತಿಯ ಹಾನಿಯು ಉಂಟಾಯಿತು.

ಪ್ರಪಂಚದ ಸಮಗ್ರ ಇತಿಹಾಸದಲ್ಲಿ ಇಂತಹ ಭಾರೀ ಕ್ರೌರ್ಯ ಅಧರ್ಮದ ಪರಾಕಾಷ್ಠವನ್ನು ಬೀಭತ್ಸವನ್ನು ಕಾಣಲಾರೆವು. ಇತ್ತೀಚೆಗೆ ನಡೆದ ಯಾವ ಭಯೋತ್ಪಾದಕರ ದಾಳಿಯೂ ಇದರ ಒಂದಂಶಕ್ಕೂ ಸರಿಯಾಗಲಾರದು ಎಂದರೆ ಅತಿಶಯೋಕ್ತಿಯಾಗದು.

**ಕಲಿಯ ಪ್ರಭಾವ -**

ಆ ರಾತ್ರಿಯಲ್ಲಿ ಅಶ್ವತ್ಥಾಮನು ಯುದ್ಧಕ್ಕೆ ಸಾಗುವ ಮುನ್ನ ತನ್ನ ತೀರ್ಮಾನವನ್ನು ತನ್ನೊಡನಿದ್ದ ಕೃಪ-ಕೃತವರ್ಮರಿಗೆ ತಿಳಿಸಿದನು. ಈ ಧರ್ಮಬಾಹಿರವಾದ

ಬರ್ಬರಕೃತ್ಯವು ಸಲ್ಲದು ಎಂದು ಕೃಪರು ಆತನಿಗೆ ತಿಳಿ ಹೇಳಿದರು- 'ನಿಃಶಸ್ತ್ರರು, ಮಲಗಿದವರು, ರಥಹೀನರು ಇಂತಹವರ ಮೇಲೆ ಎರಗುವುದು ತಪ್ಪು. ಮತ್ತು ಶಿಬಿರದಲ್ಲಿ ಸ್ತ್ರೀಯರು, ವೈದ್ಯರು ಮತ್ತುಳಿದ ಪರಿಚಾರಕರು ಇರುವರು. ಇವರ ಮೇಲೆ ಶಸ್ತ್ರಗಳನ್ನು ಪ್ರಯೋಗಿಸುವುದು ತಪ್ಪು. ಈ ವರೆಗಿನ ಯುದ್ಧದಲ್ಲಿ ಆದ ಸೋಲಾಗಲೀ ಗೆಲುವಾಗಲೀ ದೈವ ನಿಶ್ಚಯದಂತೆ ನಡೆದಿದೆ. ಒಂದೊಮ್ಮೆ ನೀನು ಶತ್ರುಗಳಿಗೆ ಪ್ರತೀಕಾರ ಮಾಡಲೇಬೇಕೆಂದು ಬಯಸುವದಾದಲ್ಲಿ ಪ್ರಾಜ್ಞಳಾದ ಗಾಂಧಾರಿದೇವಿಯನ್ನು, ವಿದುರರನ್ನು ಸಂದರ್ಶಿಸಿ ತೀರ್ಮಾನಿಸುವುದು ಒಳಿತು. ಅಥವಾ ಬೆಳಗಾದ ನಂತರ ನಾವು ಮೂವರು ಸೇರಿ ಯುದ್ಧವನ್ನು ಸಾರುವ. ನಮ್ಮ ಆದಟಿನ ಮುಂದೆ ಪಾಂಡವರ ಸೇನೆಯು ಅತಿ ದುರ್ಬಲ, ಜಯವು ನಮ್ಮದೆ, ತುಂಬ ಬಳಲಿರುವಿ, ಮಲಗು ಸ್ವಲ್ಪವಿಶ್ರಮಿಸು' ಎಂದು.

ಪಾಂಡವರು ಧರ್ಮದಿಂದ ಹೋರಾಡಿರುವರಾ ? ಪ್ರಯೋಪವೇಶಕ್ಕೆ ಕುಳಿತಿದ್ದ , ಎಲ್ಲರಿಗೂ ಗುರುಗಳಾದ ನನ್ನ ತಂದೆಯನ್ನು ಆ ಪಾಪಿ ಧೃಷ್ಟದ್ಯುಮ್ನನು ಕೊಂದಿದ್ದು ಸರಿಯೇ ? ಹೂತಿದ್ದ ರಥದ ಚಕ್ರವನ್ನು ಮೇಲೆತ್ತುತ್ತಿದ್ದ ಕರ್ಣನ ಶಿರವನ್ನು ತರಿದಿದ್ದು ಸರಿಯೇ ? ಮಾವ! ಮನುಷ್ಯನು ಒಂದು ರೀತಿಯಲ್ಲಿ ಯೋಚಿಸುತ್ತಾನೆ. ಆತನ ಯೋಚನೆಗೆ ಪೂರಕವಾಗಿ ಯಾರು ಸ್ಪಂಧಿಸುವರೋ ಅವರು ಆತನಿಗೆ ಹಿತಕಾರರು. ಯಾರು ಸ್ಪಂದಿಸುವುದಿಲ್ಲವೋ ಅವರನ್ನು ಆತನು ಶತ್ರುಗಳು ಎಂದೇ ಭಾವಿಸುವನು. ವಸ್ತುತಃ ತಾನೇ ಹಿಂದೆ ತೀರ್ಮಾನಿಸಿದ್ದನ್ನು ಕಾಲಾನಂತರದಲ್ಲಿ ತಪ್ಪು ಎಂದು ಒಪ್ಪುವನು. ಆದರೂ ತತ್ಕಾಲದ ತೀರ್ಮಾನವನ್ನು ಬಿಡಲು ಒಪ್ಪನು. ಆದ್ದರಿಂದ ನಾನು ಈ ಕೂಡಲೆ ಪಾಂಡವರ ವಿನಾಶಕ್ಕೆ ಹೊರಡುವೆನು ಎನ್ನುತ್ತಾ ರಥವನ್ನೇರಿದನು.

ದುರ್ಯೋಧನನು ಬಾಲ್ಯದಿಂದಾರಂಭಿಸಿ ಪಾಂಡವರಿಗೆ ವಿಷವಿಕ್ಕುವುದು, ಆಗ್ನಿಯಿಕ್ಕುವುದು, ಆಸ್ತಿಯನ್ನು ಲಪಟಾಯಿಸುವುದು ಈ ಮುಂತಾದ ದ್ರೋಹವನ್ನೆಸಗಿದ್ದರೂ ಅದಾವುದೂ ಅಶ್ವತ್ಥಾಮನ ಚಿಂತನಗೆ ಬರಲಿಲ್ಲ. ಏಕಾಕಿಯಾಗಿದ್ದ ಅಭಿಮನ್ಯುವನ್ನು ಆರು ಮಂದಿ ಅತಿರಥಮಹಾರಥರು ಒಟ್ಟಾಗಿ ಬಲಿತೆಗೆದುಕೊಂಡಿದ್ದರು. ಪಾಂಡವರ ಸೋದರಮಾವನಾದ ಶಲ್ಯರಾಜನನ್ನು ಮೋಸಗೊಳಿಸಿ ತನ್ನೆಡೆಗ ದುರ್ಯೋಧನನು ಸೆಳೆದುಕೊಂಡಿದ್ದನು. ಇದಾವುದೂ ಅನ್ಯಾಯವೆಂದು ಅಶ್ವತ್ಥಾಮನ ಅರಿವಿಗೆ ಬರಲಿಲ್ಲ. ಕಲಿಯ ಪ್ರಭಾವವು ಮಾನವನ ವಿವೇಕವನ್ನೇ ಮಸಡುಗೊಳಿಸುವುದು ಎನ್ನಲು ಈ ಅಶ್ವತ್ಥಾಮನು ಒಂದು ಉದಾಹರಣೆ.

ವಿಧಿನಿರ್ಣಯ - ಧೃತರಾಷ್ಟ್ರನು ಪಾಂಡವರಿಗಾದ ಅಪಾರ ಹಾನಿಯನ್ನು ಕೇಳಿ ಒಳಗೆ ಹರ್ಷಿಸಿದನು. ಸಂಜಯನಲ್ಲಿ ಪ್ರಶ್ನಿಸಿದನು. ಈ ಅಶ್ವತ್ಥಾಮನು ಇಂಥಹ ಮಹತ್ಕಾರ್ಯವನ್ನು ಈ ಮೊದಲೆ ಏಕೆ ಮಾಡಲಿಲ್ಲ?

'ಕೋ ಹಿ ತೇಷಾಂ ಸಮಕ್ಷಂ ತಾನ್ ಹನ್ಯಾದಪಿ ಮರುತ್ಪತಿಃ ? (ಕೃಷ್ಣ ಪಾಂಡವರು ಮತ್ತು ಸಾತ್ಯಕಿ ಇವರ ಉಪಸ್ಥಿತಿಯಲ್ಲಿ ಯಾವ ವಾಯುದೇವನು ಪಾಂಡವರ ಪಕ್ಷೀಯರನ್ನು ಸಂಹರಿಸಲು ಸಮರ್ಥನಾಗನು?)' ಎಂದು ಸಂಜಯನು ಧೃತರಾಷ್ಟ್ರನಿಗೆ ಉತ್ತರಿಸುತ್ತಾನೆ. ಇವರುಗಳ ಅನುಪಸ್ಥಿತಿಯಲ್ಲಿ ಈ ದುರ್ಘಟನೆಯು ನಡೆಯಿತು. ವಿಧಿಯು ಈ ಅವಘಡವನ್ನು ನಿಶ್ಚಯಿಸಿತ್ತು, ಅಶ್ವತ್ಥಾಮನನ್ನು ನಿಮಿತ್ತನನ್ನಾಗಿ ಮಾಡಿಕೊಂಡು ತನ್ನ ನಿರ್ಣಯವನ್ನು ಕಾರ್ಯಗತಗೊಳಿಸಿತು.

ಶ್ರೀವಾಸುದೇವನ ಆಜ್ಞೆಯಿಂದ ರುದ್ರದೇವನು ಪಾಂಡವರ ಸೇನೆಯನ್ನು ಸಂರಕ್ಷಿಸಲು ಆ ಶಿಬಿರಲ್ಲಿ ಸನ್ನಿಹಿತನಾಗಿದ್ದನು. ಆ ಪಿನಾಕಧರನು ತನ್ನ ಅಂಶೋತ್ಪನ್ನನಾದ ಅಶ್ವತ್ಥಾಮನನ್ನು ಈಗಲೂ ತಡೆದನು. ನಂತರದಲ್ಲಿ ಹರಿಯ ಇಚ್ಛೆ ಏನೆಂದು ತಿಳಿದು ಆ ಅಶ್ವತ್ಥಾಮನಿಗೆ ಸವಡನ್ನಿತ್ತನು. ಈ ಅಂಶವನ್ನು ಶ್ರೀಮದಾಚಾರ್ಯರು ತಮ್ಮ ತಾತ್ಪರ್ಯ ನಿರ್ಣಯದಲ್ಲಿ ಸೂಚಿಸಿದ್ದಾರೆ.

**ಉಗ್ರರೂಪಧರಂ ರುದ್ರಂ ಸ್ವಕೀಯಾಂ ತನುಮೇವ ಸಃ ।**
**ಪರೀತಂ ವಾಸುದೇವೇನ ಬಹುಕೋಟಿ ಸ್ವರೂಪಿಣಾ ॥**
**ದೃಷ್ಟ್ವೈವ ವಾಸುದೇವಂ ತಂ ಅತ್ರಸದ್ ಗೌತಮೀಸುತಃ ।**

(ತನ್ನ ಮೂಲರೂಪಿಯಾದ ಉಗ್ರರೂಪವನ್ನು ಧರಿಸಿದ ಅಸಂಖ್ಯಾತ ವಾಸುದೇವ ರೂಪಗಳಿಂದ ಸುತ್ತುವರೆದು ನಿಂತ ರುದ್ರನನ್ನು ಕಂಡ ಅಶ್ವತ್ಥಾಮನು ಬೆಚ್ಚಿದ.)

**ಅರಕ್ಷಂ ಪಾರ್ಥಶಿಬಿರಮ್ ಇಯಂತಂ ಕಾಲಮೇವ ತು ।**
**ತದಿಚ್ಛಯೈವ ನಿರ್ದಿಷ್ಟೋ ದಾತ್ಸೇ ಮಾರ್ಗಂ ತವಾದ್ಯ ಚ ॥**

(ಆಗ ಅಶ್ವತ್ಥಾಮನು ರುದ್ರದೇವನನ್ನು ಉದ್ದೇಶಿಸಿ ಆಚರಿಸಿದ ಮಾನಸೀ ಯಜ್ಞಕ್ಕೆ ಮೆಚ್ಚಿದ ರುದ್ರದೇವನು ನುಡಿದನು- ಈವರೆಗೆ ಹರಿಯ ಆಜ್ಞೆಯಂತೆ ಪಾಂಡವರ ಶಿಬಿರವನ್ನು ಸಂರಕ್ಷಿಸಿರುವೆ. ಇನ್ನು ಅವನ ಇಚ್ಛೆಯಂತೆ ನಿನಗೆ ಅವಕಾಶವನ್ನು ನೀಡುವೆ.
- ಮ.ಭಾ.ತಾ.ನಿ-28.126,127,132)

ಒಟ್ಟಿನಲ್ಲಿ ಓರ್ವ ಅಶ್ವತ್ಥಾಮನಿಂದಲೇ ಅತಿ ಸಮರ್ಥರಾದ ಧೃಷ್ಟದ್ಯುಮ್ನಾದಿ ಮಾಹಾರಥಿಕರನ್ನು ಸಂಹರಿಸುವುದು ಅಶಕ್ಯ. ರುದ್ರದೇವನೇ ಅವನಲ್ಲಿ , ಅವನ ಅಸ್ತ್ರಗಳಲ್ಲಿ ಸನ್ನಿಹಿತನಾಗಿ ಹರಿಯ ಆಜ್ಞೆಯಂತೆ ಈ ಕಾರ್ಯವನ್ನು ನಡೆಸಿರುವನು. ಅದಕ್ಕಾಗಿಯೇ ಶ್ರೀಕೃಷ್ಣನು ಅಂದಿನ ರಾತ್ರಿಯಂದು ಪಾಂಡವರನ್ನು ಕರೆದುಕೊಂಡು ಬೇರೆಡೆಗೆ ತೆರಳಿದ್ದನು.

ಅಶ್ವತ್ಥಾಮನು ಮತ್ತು ಧೃಷ್ಟದ್ಯುಮ್ನಾನಾದಿ ಪಾಂಡವರ ಸೇನೆಯವರೂ ಯುದ್ಧ ಆರಂಭವಾದಾಗಿನಿಂದಲೂ ನಿತ್ಯದಲ್ಲಿಯೂ ಈ ಘಟನೆಯನ್ನು ಸ್ವಪ್ನದಲ್ಲಿ ಭಾಗಶಃ ಕಾಣುತ್ತಿದ್ದರು ಎಂದು ಆಚಾರ್ಯರು ತಿಳಿಸಿದ್ದಾರೆ-

**'ಅವಶ್ಯಂ ಭಾವಿನಂ ಮೃತ್ಯುಂ ಧೃಷ್ಟದ್ಯುಮ್ನೋ ವಿಚಿಂತ್ಯ ತಮ್ ।**
**ತೂಷ್ಣೀಂ ಬಭೂವ ಸ್ವಪ್ನೇಽಪಿ ನಿತ್ಯಂ ಪಶ್ಯತಿ ತಾಂ ಮೃತಿಮ್ ॥'**

ಮಭಾ.ತಾ.ನಿ.28.138

(ಅಶ್ವತ್ಥಾಮನು ಸಂಹರಿಸುವ ಸಂದರ್ಭದಲ್ಲಿ ಅವಶ್ಯವಾಗಿ ಸಂಭವಿಸುವ ಮೃತ್ಯು ಇದು ಎಂದು ಆಲೋಚಿಸಿ ಸುಮ್ಮನಾದನು ಧೃಷ್ಟದ್ಯುಮ್ನ. ಆತನು ಈಗ ಒದಗಿದ ಮೃತ್ಯುವನ್ನು ನಿತ್ಯದಲ್ಲೂ ಸ್ವಪ್ನದಲ್ಲಿ ಕಾಣುತ್ತಿದ್ದನು.)

**ಐಷೀಕಾಸ್ತ್ರಪ್ರಯೋಗ-**

ರಾತ್ರಿಯಲ್ಲಿ ಶಿಬಿರದಲ್ಲಿ ಮಲಗಿದ್ದ ಪಾಂಡುಪುತ್ರರನ್ನು ಮತ್ತು ಪಾಂಚಾಲರನ್ನು ಅಶ್ವತ್ಥಾಮನು ಸಂಹರಿಸಿದ್ದನ್ನು ತಿಳಿದ ಭೀಮಸೇನನು ಅಶ್ವತ್ಥಾಮನ ನಿಗ್ರಹಕ್ಕೆ ಹೊರಟನು. ಆಗ ಶ್ರೀಕೃಷ್ಣನು ಧರ್ಮನಂದನ ಮತ್ತು ಅರ್ಜುನನೊಡನೆ ಭೀಮನ ಬಳಿಗೆ ಸಾಗಿದನು. ಕೃಷ್ಣನು ಈ ಸಂದರ್ಭದಲ್ಲಿ ಅಶ್ವತ್ಥಾಮನ ದುಷ್ಟಭಾವವನ್ನು ಧರ್ಮನಂದನನಿಗೆ ತಿಳಿಸಿದನು. ಈ ಹಿಂದೆ ಈತನು ದ್ವಾರಕೆಗೆ ಬಂದಿದ್ದನು, ನನ್ನ ಸುದರ್ಶನಾಸ್ತ್ರವನ್ನು ಯಾಚಿಸಿದನು, ಆದರೆ ಅದನ್ನು ಎತ್ತಲಾರದೆ ವಿಫಲನಾದನು. ಆಗ ನಾನು ಅವನನ್ನು ವಿಚಾರಿಸಿದೆ, ಏತಕ್ಕಾಗಿ ಈ ಅಸ್ತ್ರವನ್ನು ಬಯಸಿರುವಿ? ಈ ಹಿಂದೆ ಬಲರಾಮನಾಗಲಿ, ಪ್ರದ್ಯುಮ್ನನಾಗಲಿ, ಅರ್ಜುನನಾಗಲಿ ಮತ್ತೆ ಬೇರೇ ಯಾರಾಗಲಿ ನನ್ನ ಪರಮಾಪ್ತರೂ ಬಯಸದ ಈ ಬಯಕೆ ನಿನಗೆ ಏಕೆ ಬಂತು? ಆತನು ಉತ್ತರಿಸಿದನು 'ಈ ಶ್ರೇಷ್ಠ ಅಸ್ತ್ರದಿಂದ ದುರ್ಯೋಧನನ ಎಲ್ಲ ಶತ್ರುಗಳನ್ನು ನಿಗ್ರಹಿಸಿ ಆತನಿಗೆ ಅಸಪತ್ನವಾದ ರಾಜ್ಯದ ಸಿರಿಯನ್ನು ಅನುಭವಿಸುವಂತೆ ಮಾಡುವ

ಇಚ್ಛೆಯಿಂದ ಈ ಅಸ್ತ್ರವನ್ನು ಬಯಸಿರುವೆನು' ಎಂದು. ಕರ್ಣನು ದುರ್ಯೋಧನನ ಆಪ್ತ ಅದಕ್ಕೆ ಕಾರಣ ಆತನಿಗೆ ಅಂಗರಾಜ್ಯವನ್ನು ನೀಡಿದವನು ದುರ್ಯೋಧನ. ಹಾಗಾಗಿ ದುರ್ಯೋಧನನಿಗಾಗಿ ಸೆಣಸಿದ. ಅಶ್ವತ್ಥಾಮನಾದರೋ ಅರ್ಧಪಾಂಚಾಲಕ್ಕೆ ಸ್ವಾಮಿ, ಈ ಸ್ವಾಮ್ಯಕ್ಕೆ ಕಾರಣರು ಭೀಮಾರ್ಜುನರು, ಆದರೆ ಈತನು ನಿಮ್ಮಲ್ಲಿ ದ್ವೇಷವನ್ನು ಸಾಧಿಸುತ್ತಿರುವನು, ಇದು ವಿಧಿಯ ನಿರ್ಣಯ. ಮತ್ತೂ ಸಹ ಈತನು ಅಜಿತೇಂದ್ರಿಯನು, ಆದ್ದರಿಂದಲೇ ಈತನ ತಂದೆ ಅರ್ಜುನನಿಗೆ ಬ್ರಹ್ಮಶಿರಾಸ್ತ್ರವನ್ನು ಉಪದೇಶಿಸಿದನು, ಈತನಿಗೆ ಉಪದೇಶಿಸರಲಿಲ್ಲ. ಆದರೆ ಈತನು ಕಾಡಿಬೇಡಿ ಅವನ ತಂದೆಯಿಂದ ಆ ಅಸ್ತ್ರವನ್ನು ಪಡೆದನು. ಉಪದೇಶಿಸಿದ ದ್ರೋಣರು ಆತನಿಗೆ ತಿಳಿಸಿದ್ದರು 'ಯಾವುದೇ ಕಾರಣಕ್ಕೂ ಎಂತಹ ಸಂದರ್ಭದಲ್ಲೂ ಈ ಅಸ್ತ್ರವನ್ನು ಪ್ರಯೋಗಿಸಬಾರದು' ಎಂದು. ಆದರೆ ಈತನು ಈಗ ಭೀಮನ ಮೇಲೆ ಆ ಅಸ್ತ್ರವನ್ನು ಪ್ರಯೋಗಿಸುವನು. ಇಂತಹ ಸಂದರ್ಭದಲ್ಲಿ ನಾವು ಅಲ್ಲಿ ಇರಲೇಬೇಕು ಎಂದು ತಿಳಿಸಿದ ಕೃಷ್ಣನು, ಧರ್ಮನಂದನನಿಗೆ ಅರ್ಜುನನಿಗೆ ಲಗುಬಗೆಯಿಂದ ಭೀಮನ ಬಳಿ ಸಾಗಲು ಪ್ರಚೋದಿಸಿದನು.

ಕೃಷ್ಣನು ಊಹಿಸಿದಂತೆ ಅಶ್ವತ್ಥಾಮನು ಆ ಅಸ್ತ್ರವನ್ನು ಪ್ರಯೋಗಿಸಿದನು. ಅಶ್ವತ್ಥಾಮನು ಸಮಗ್ರ ಪಾಂಡವರ ನಾಶವನ್ನು ಸಂಕಲ್ಪಿಸಿ ಆ ಅಸ್ತ್ರವನ್ನು ಪ್ರಯೋಗಿಸಿದನು. ಕೃಷ್ಣನ ಸೂಚನೆಯಂತೆ ಅರ್ಜುನನೂ ಅದಕ್ಕೆ ಪ್ರತಿಯಾಗಿ ಬ್ರಹ್ಮಶಿರಾಸ್ತ್ರವನ್ನು ಪ್ರಯೋಗಿಸಿದನು. ಆ ಕೂಡಲೇ ಆವಿರ್ಭೂತರಾದ ವ್ಯಾಸರು ಆ ಎರಡು ಅಸ್ತ್ರಗಳ ಮಧ್ಯೆ ನಿಂತರು. 'ಈರ್ವರಿಗೂ ಅಸ್ತ್ರವನ್ನು ಉಪಸಂರಿಸಿ, ಇಲ್ಲದ ಪಕ್ಷದಲ್ಲಿ ಭೀಕರ ಬರಗಾಲದಿಂದ ಈ ದೇಶದ ಜನತೆಯು ಪೀಡಿತವಾಗುವುದು' ಎಂದು ಎಚ್ಚರಿಸಿದರು. ಅವರ ಆದೇಶದಂತೆ ಅರ್ಜುನನು ತಾನು ಪ್ರಯೋಗಿಸಿದ ಅಸ್ತ್ರಕ್ಕೆ ಆ ಕೂಡಲೇ ಉಪಸಂಹಾರವನ್ನು ಹೇಳಿದನು. ಆದರೆ ಅಶ್ವತ್ಥಾಮನು ಅಸ್ತ್ರದ ಉಪಸಂಹೃತಿಗೆ ಸಮರ್ಥನಾಗಲಿಲ್ಲ. ಅಜಿತೇಂದ್ರಿಯರು ಉಪಸಂಹರಿಸಲು ಸಮರ್ಥರಲ್ಲ, ಹಾಗಾಗಿ ಆತನು ಕೈಚೆಲ್ಲಿದನು.

ಇಲ್ಲಿ ಎರಡು ಸಂದೇಹಗಳಿವೆ, 1) ಅಶ್ವತ್ಥಾಮನನ್ನು ನಿಗ್ರಹಿಸಿದ್ದು ಭೀಮನೋ ಅರ್ಜುನನೊ?

ಭಾಗವತದಲ್ಲಿ ' **ಅಥೋಪೇತ್ಯ ಸ್ವಶಿಬಿರಂ ಗೋವಿಂದಪ್ರಿಯಸಾರಥಿಃ ।**
**ನ್ಯವೇದಯತ್ ತಂ ಪ್ರಿಯಾಯೈ ಶೋಚಂತ್ಯಾತ್ಮಜಾನ್ ಹತಾನ್ ॥**

(1.7.41. ಕೃಷ್ಣಸಾರಥಿಯಾದ ಅರ್ಜುನನು ತನ್ನ ಶಿಬಿರಕ್ಕೆ ಆಗಮಿಸಿ ಮೃತರಾದ ಮಕ್ಕಳಿಗಾಗಿ ದುಃಖಿಸುತ್ತಿರುವ ಪ್ರಿಯೆಗೆ ಆ ಮಣಿಯನ್ನು ಇತ್ತನು.) ಆದರೆ ಪ್ರಕೃತ ಭಾರತದಲ್ಲಿ 'ನಕುಲಂ ಸಾರಥಿಂ ಕೃತ್ವಾ'- ನಕುಲಸಾರಥಿಯಾದ ಭೀಮಸೇನನು ಅಶ್ವತ್ಥಾಮನನ್ನು ನಿಗ್ರಹಿಸಲು ಹೊರಟನು ಎಂದಿದೆ. ಇದಕ್ಕೆ ಶ್ರೀಮದಾಚಾರ್ಯರು ಭಾಗವತತಾತ್ಪರ್ಯದಲ್ಲಿ 1.7.15ನೇ ಪದ್ಯದಲ್ಲಿ ಸ್ಕಂದಪುರಾಣದ ವಚನವನ್ನು ಉಲ್ಲೇಖಿಸಿ ಈ ವಿರೋಧವನ್ನು ಪರಿಹಸಿರುವರು

**'ಪಾರ್ಥಾನುಯಾತಮಾತ್ಮಾನಂ ದ್ರೌಣಿಃ ಸ್ವಪ್ನೇ ದದರ್ಶ ಹ'** ಅಂದರೆ ಭಾಗವತದಲ್ಲಿ ತಿಳಿಸಿರುವಂತೆ ಅಶ್ವತ್ಥಾಮನು ನಿತ್ಯದಲ್ಲಿ ಸ್ವಪ್ನವನ್ನು ಕಾಣುತ್ತಿದ್ದನು- ಅರ್ಜುನನು ತನ್ನನ್ನು ನಿಗ್ರಹಿಸಿದಂತೆ. ಮಹಾಭಾರತದಲ್ಲಿ ತಿಳಿಸಿರುವುದು ನಿಜಘಟನೆ ಎಂದು ತಿಳಿಯುವುದು.

2) ಬ್ರಹ್ಮಶಿರಾಸ್ತ್ರದಿಂದ ಭೀಮನಿಗೆ ಹಾನಿಯು ಇತ್ತೋ ಇಲ್ಲವೋ?

ಪ್ರಕೃತ ಭಾರತದಲ್ಲಿ ಧರ್ಮನಂದನನಿಗೆ ಕೃಷ್ಣನು ಹೇಳುತ್ತಾನೆ-

'ವೇದ ಚಾಸ್ತ್ರಂ ಬ್ರಹ್ಮಶಿರಃ ತಸ್ಮಾದ್ರಕ್ಷ್ಯೋ ವೃಕೋದರಃ- ಅಶ್ವತ್ಥಾಮನು ಬ್ರಹ್ಮಶಿರಾಸ್ತ್ರವನ್ನು ಬಲ್ಲವನಾಗಿರುವನು, ಆದರಿಂದ ವೃಕೋದರನನ್ನು ಸಂರಕ್ಷಿಸಬೇಕು' ಎಂದು. ಆದರೆ ಪ್ರಕೃತ ಮಹಾಭಾರತದಲ್ಲಿ ಅಸ್ತ್ರಪ್ರಯೋಗದ ಸಂದರ್ಭದಲ್ಲಿ ವ್ಯಾಸರು ಇಲ್ಲಿಗೆ ಆಗಮಿಸಿ ನುಡಿಯುವರು- 'ಅಸ್ತ್ರಂ ಬ್ರಹ್ಮಶಿರೋ ಯತ್ರ ಪರಮಾಸ್ತ್ರೇಣ ಬಾಧ್ಯತೇ ।

**ಸಮಾ ದ್ವಾದಶಪರ್ಜನ್ಯಃ ತದ್ರಾಷ್ಟ್ರೇ ನಾಭಿವರ್ಷತಿ ॥ -**

ಬ್ರಹ್ಮಶಿರಾಸ್ತ್ರವು ಬ್ರಹ್ಮಶಿರಾಸ್ತ್ರದಿಂದ ಬಾಧಿತವಾದಲ್ಲಿ ಆ ರಾಷ್ಟ್ರದಲ್ಲಿ ಹನ್ನೆರಡು ವರ್ಷಗಳ ಪರ್ಯಂತ ಮಳೆಬೀಳುವುದಿಲ್ಲ.'(ಮಹಾ.ಭಾರ. ಐ.6.26.) ಅಂದರೆ ವ್ಯಾಸರು ಭೀಮಸೇನನಿಗೆ ಯಾವ ವಿಧವಾದ ಹಾನಿಯನ್ನು ಪ್ರಸ್ತಾಪಿಸಿಲ್ಲ. ಮತ್ತೂ ಸಹ ಇದೇ ಅಶ್ವತ್ಥಮನು ಹಿಂದೆ ನಾರಾಯಣಾಸ್ತ್ರವನ್ನು ಭೀಮಸೇನನ ಮೇಲೆ ಪ್ರಯೋಗಿಸಿದ್ದನು. ಆದರೆ 'ಅಗ್ನಿಯ ಮೇಲೆ ಅಗ್ನಿಯು ಎರಗಿದಂತಾಯಿತು' ಎಂದು ಮಹಾಭಾರತವು ತಿಳಿಸಿದೆ, ಭೀಮನಿಗೆ ಅಸ್ತ್ರದಿಂದ ಯಾವ ಬಾಧಕವೂ ಇಲ್ಲ ಎಂದು ತಿಳಿಸಿದೆ.

ಈ ಸಂದರ್ಭದಲ್ಲಿ ಶ್ರೀಮದಾಚಾರ್ಯರ ಉಪದೇಶವು ಹೀಗಿದೆ-

'ಅವಧ್ಯೋ ಭೀಮಸೇನಸ್ತದ್ ಅಸ್ತ್ರಂ ಚಾಮೋಘಮೇವತತ್ । ಭೀಮಸೇನನು ಅವಧ್ಯ, ಈ ಅಸ್ತ್ರವೂ ಅಮೋಘ ಈ ಎರಡು ನಿಯಮಗಳನ್ನು ಭಗವಂತನೇ ನಿರ್ಧರಿಸಿರುವನು' (ಮಹಾಭಾರ.ತಾ.28.157.) ಇದಕ್ಕೆ ಕಾರಣವನ್ನು ತಿಳಿಸುತ್ತಾರೆ-

'ಗಾಯತ್ರೀ ತತ್ರ ಮಂತ್ರೋ ಯದ್ ಬ್ರಹ್ಮಾ ತಧ್ಯಾನದೇವತಾ- ಈ ಅಸ್ತ್ರಕ್ಕೆ ಗಾಯತ್ರಿಯು ಮಂತ್ರ, ಬ್ರಹ್ಮನೇ ಮುಖ್ಯದೇವತೆ.' (ಮಹಾಭಾರತ ತಾ.28.158.)

ಲಕ್ಷಾಲಂಕಾರದ ವೈಶಿಷ್ಟ್ಯ- ಶ್ರೀವಾದಿರಾಜರು ದಾರಿತಪ್ಪುವ ಸಂದರ್ಭದಲ್ಲಿ ಬೆಳಕಾಗಿ ಅನುಗ್ರಹಿಸಿರುವರು. ಈ ಪರ್ವದ ಅಧ್ಯಾಯ ನಾಲ್ಕು ಇಪ್ಪತ್ತೆರಡನೆಯ ಶ್ಲೋಕದಲ್ಲಿ-

'ಅಪಾಂಡವಾಯೇತಿ ರುಷಾ ವಾಚಮುತ್ಸೃಜ್ಯ ದಾರುಣಮ್ ।- ಅಶ್ವತ್ಥಾಮನು ಕೋಪದಿಂದ ಪಾಂಡುಪುತ್ರನ ನಾಶಕ್ಕಾಗಿ ಎಂದು ಹೇಳುತ್ತಾ ಅಸ್ತ್ರವನ್ನು ಎಸೆದನು' ಎಂದಿದೆ. ಮತ್ತು ಇದೇ ಪರ್ವದ ಆರನೇ ಅಧ್ಯಾಯದ ಹತ್ತೊಂಭತ್ತನೆಯ ಶ್ಲೋಕದಲ್ಲಿ - 'ಅಪಾಂಡವಾಯೇತಿ ಮುನೇ- ಮುನಿಯೇ! ಪಾಂಡುಪುತ್ರನ ನಾಶಕ್ಕಾಗಿ' ಎಂದು ಸಂಕಲ್ಪಿಸಿ ಅಸ್ತ್ರವನ್ನು ಪ್ರಯೋಗಿಸಿರುವೆನು' ಎಂದು ಅಶ್ವತ್ಥಾಮನೇ ಹೇಳಿಕೊಂಡಿರುವನು. ಇದರಿಂದ ಅಶ್ವತ್ಥಾಮನು ಕೇವಲ ಭೀಮಸೇನನ ವಿನಾಶಕ್ಕಾಗಿ ಅಸ್ತ್ರವನ್ನು ಪ್ರಯೋಗಿಸಿರುವನು ಎಂದು ತಿಳಿಯುತ್ತದೆ. ಆದರೆ ಮುಂದೆ ಈ ಅಸ್ತ್ರವನ್ನು ಉಪಶಮನಮಾಡು ಎಂದು ವ್ಯಾಸರು ಆದೇಶಿಸುವಾಗ ಅಶ್ವತ್ಥಾಮನು ನುಡಿಯುವನು 'ತದಿದಂ ಪಾಡುಪುತ್ರಾಣಾಮ್ ಅಂತಾಯ್ಯೆವ ಸುಸಂಹಿತಮ್' - ಈ ಅಸ್ತ್ರವು ಪಾಂಡುಪುತ್ರರ ವಿನಾಶಕ್ಕಾಗಿ ಪ್ರಯೋಗಿಸಲಾಗಿದೆ' ಎಂದು. ಹೀಗೆ ಹಿಂದಿನ ಮುಂದಿನ ವಾಕ್ಯಗಳಲ್ಲಿ ವಿರೋಧವು ಕಾಣುವುದು. ಶ್ರೀವಾದಿರಾಜರು ತಿಳಿಸುತ್ತಾರೆ 'ಅಪಾಂಡವಾಯ' ಎನ್ನುವುದು ಭಾವಪ್ರಧಾನನಿರ್ದೇಶ ಎಂದು. ಇದರಿಂದ ಅಪಾಂಡವಾಯ ಎನ್ನುವ ಶಬ್ದವು ಪಾಂಡವರನಾಶಕ್ಕಾಗಿ ಎಂಬ ಭಾವವನ್ನು ಹೊಂದಿದೆ ಎಂದು ತಿಳಿಸಿದಂತಾಗುವುದು. ಈ ಕಾರಣದಿಂದಲೇ ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ 128.161ನೇ ಶ್ಲೋಕದಲ್ಲಿ 'ಅಪಾಂಡವತ್ವವಿಧಿತ್ಸಯಾ' ಎಂದು ಪ್ರಯೋಗಿಸಿ ಈ ಮಹಾಭಾರತದ ವಾಕ್ಯದ ವ್ಯಾಖ್ಯಾನವನ್ನು ಸೂಚಿಸಿರುವರು.

ಉಪಸಂಹಾರವು ತಿಳಿಯದಿದ್ದರೂ ಬ್ರಹ್ಮಶಿರಾಸ್ತ್ರವನ್ನು ಪ್ರಯೋಗಿಸಿದ್ದನು ಅಶ್ವತ್ಥಾಮನು. ತನ್ನಿಮಿತ್ತವಾಗಿ ಶ್ರೀವ್ಯಾಸರು ಆತನಿಗೆ ಶಿಕ್ಷೆ ಎಂದು ಆತನ ತಲೆಯಲ್ಲಿ

ಆತನ ಹುಟ್ಟಿನಿಂದ ಜೊತೆಗಿದ್ದ ಶಿರೋರತ್ನವನ್ನು ಭೀಮನಿಗೆ ನೀಡಲು ಆದೇಶಿಸಿದರು. ಅಶ್ವತ್ಥಾಮನೇ ತಿಳಿಸುವಂತೆ ' ನ ಚ ರಕ್ಷೋಗಣಭಯಂ ನ ತಸ್ಕರಭಯಂ ತಥಾ' ಇಂತಹ ಅನೇಕ ಮಹಿಮಾಯುಕ್ತವಾದದ್ದು ಆ ಮಣಿ. ಅದರ ಸಾನ್ನಿಧ್ಯದಿಂದ ಅಶ್ವತ್ಥಾಮನಿಗೆ ನಿದ್ರೆ ಬಾಯಾರಿಕೆ ರೋಗ ಮುಂತಾದವುಗಳ ಬಾಧೆಯಿರಲಿಲ್ಲ. ಇಂತಹ ಮಣಿಯನ್ನು ನೀಡು ಎಂದು ಆದೇಶಿಸಿದ್ದರಿಂದ ಅನಿವಾರ್ಯವಾಗಿ ಆತನು ನೀಡಲೇ ಬೇಕಾಯಿತು. ಇದರಿಂದ ಆತನು ಈ ಕಲ್ಪಮುಗಿಯುವವರೆಗೂ ಅನೇಕವಿಧ ರೋಗರುಜಿನ, ದೇಹದಲ್ಲಿ ದುರ್ಗಂಧ ಮುಂತಾದವುಗಳನ್ನು ಅನುಭವಿಸುವಂತಾಯಿತು. ಹಾಗಾಗಿ ಆ ಮಣಿಯನ್ನು ನೀಡುವಾಗ ಆತನು ನುಡಿಯುವನು- 'ಅಯಂ ಮಣಿರಯಂ ಚಾಹಮ್' ಎಂದು. ಶಬ್ದತಾಡಿತ ಅರ್ಥ 'ಈ ಮಣಿಯು ಮತ್ತು ಈ ನಾನು' ಎಂದು ಅಸಂಗತವಾಗಿ ತೋರುವುದು. ಶ್ರೀವಾದಿರಾಜರು ಪ್ರಕೃತ ವಾಕ್ಯವನ್ನು ವ್ಯಾಖ್ಯಾನಿಸುತ್ತಾ ತಿಳಿಸುವರು ಇಲ್ಲಿರುವ 'ಚ' ಶಬ್ದವು 'ಏವ' ಎಂಬ ಅರ್ಥದಲ್ಲಿದೆ ಎಂದು. ಇದರಿಂದ ಈ ವಾಕ್ಯದ ಭಾವವು ಹೀಗಾಗುವುದು- ಈ ಮಣಿಯು ನಾನೇ' ಅಂದರೆ 'ಈ ಮಣಿಯು ನನ್ನ ಜೀವವಿದ್ದಂತೆ, ಇದಿಲ್ಲದೆ ನನ್ನ ಅಸ್ತಿತ್ವವೇ ಇಲ್ಲ' ಎಂದು ಅಶ್ವತ್ಥಾಮನು ತಿಸುತ್ತಿರುವನು ಎಂದು ರಾಜರು ಉಪದೇಶಿಸಿರುವರು. ಹೀಗೆ ಆಚಾರ್ಯರು ಮತ್ತು ರಾಜರು ಅಲ್ಲಲ್ಲಿ ನಮಗೆ ಮಾರ್ಗದರ್ಶನವನ್ನು ನೀಡುರುವುದನ್ನು ಕಾಣಬಹುದಾಗಿದೆ.

## ಸ್ತ್ರೀಪರ್ವ

ಮೊದಲೇ ತಿಳಿಸಿದಂತೆ ಮಹಾಭಾರತದ ಉದ್ದೇಶ ಪರತತ್ತ್ವದ ಉಪದೇಶ, ಆದರೆ ಈ ಉಪದೇಶವು ಮನದಲ್ಲಿ ಪ್ರತಿಷ್ಠಿತವಾಗಬೇಕಾದಲ್ಲಿ ಮನವು ಶುದ್ಧವಾಗಿರಬೇಕು. ಅದಕ್ಕಾಗಿ ಧರ್ಮದ ಮತ್ತು ನೀತಿಯ ಉಪದೇಶಗಳನ್ನೂ ಮಹಾಭಾರತದಲ್ಲಿ ಹೇರಳವಾಗಿ ಕಾಣಬಹುದಾಗಿದೆ.

ಪ್ರಕೃತ ಸ್ತ್ರೀಪರ್ವದ ಆದಿಯಲ್ಲಿ ಪುತ್ರಶೋಕದಿಂದ ತಪ್ತನಾದ ಧೃತರಾಷ್ಟ್ರನಿಗೆ ಸಂಜಯ ವಿದುರ ಮತ್ತು ವ್ಯಾಸರು ಉಪದೇಶಿಸುವರು. ಸಮಾಜದಲ್ಲಿ ಈ ಮೂವರ ಸ್ಥಾನವು ಯಾವ ಅಂತಸ್ತಿನದು, ಅವರ ಅರಿವಿನ ಹರವು ಎಷ್ಟು ಈ ಎಲ್ಲವನ್ನೂ ವಾಚಕರು ಬಲ್ಲರಾಗಿದ್ದಾರೆ. ಮತ್ತು ವಾವೆಯಿಂದ ಅವರು ಧೃತರಾಷ್ಟ್ರನಲ್ಲಿ ಯಾವತರಹದ ಅಧಿಕಾರವನ್ನು ಹೊಂದಿದ್ದಾರೆ ಎನ್ನುವುದನ್ನೂ ವಾಚಕರು ತಿಳಿದವರೇ ಆಗಿರುವರು. ಪ್ರಕೃತ ಈ ಮೂವರ ಉಪದೇಶಗಳನ್ನು ಉಪದೇಶಕರ ವ್ಯಕ್ತಿತ್ವ ಅಧಿ

ಕಾರ ಅನುಬಂಧ ಮತ್ತು ಅವರ ಅರಿವಿನ ಹರವು ಇವುಗಳನ್ನು ಮನದಲ್ಲಿ ಇಟ್ಟುಕೊಂಡು ಗಮನಿಸಬೇಕು, ಆಗ ನಾವು ಭಾರತದಲ್ಲಿನ ಕುಸರೀ ಕೆಲಸದ ಸೊಬಗನ್ನು ಮನಗಾಣಬಹುದಾಗಿದೆ.

ಸಂಜಯನು ಸಮಾನ್ಯ ಮನುಷ್ಯ, ವಾವೆಯಲ್ಲಿ ಧೃತರಾಷ್ಟ್ರನ ಸಾರಥಿ, ತನ್ನ ಹದ್ದಿನಲ್ಲಿ ಆತ ಮಾತನಾಡಬೇಕು. ಹಾಗಾಗಿ ಅವನ ಮಾತು- 'ಮಹಾರಾಜ! ನಾವು ಒಂದು ಕೆಲಸವನ್ನು ಮಾಡಿದ ಅನಂತರದಲ್ಲಿ ಪಾಶ್ಚಾತ್ತಾಪ ಪಡುವಂತಾಗಬಾರದು, ಆದರೆ ನಿಮ್ಮ ಮಗನನ್ನು ನೀವು ನಿಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳಲಿಲ್ಲ, ದೊಡ್ಡವರು, ಜ್ಞಾನಿಗಳೂ ತಿಳಿಹೇಳಿದಾಗ ಅಸಡ್ಡೆ ಮಾಡಿದಿರಿ. ಈಗ ದುಃಖಿಸಿ ಪ್ರಯೋಜನವಿಲ್ಲ ಮೇಲೇಳಿ ಮುಂದಿನ ಕರ್ಮಗಳ ಚಿಂತೆಯನ್ನು ಮಾಡಿ' ಎನ್ನುತ್ತಾನೆ.

ವಿದುರ ದೊಡ್ಡ ಜ್ಞಾನಿ, ಆತನ ಸಮಕಾಲೀನರಾದ ಅನೇಕ ರಾಜ-ಮಹಾರಾಜರು, ಮಂತ್ರಿ- ಮಾಗದರು ಮುಂತಾದವರು ತಮ್ಮ ಸಮಸ್ಯೆಗಳಿಗೆ ತಮ್ಮ ಆಡಳಿತದ ಬಗ್ಗೆ ಇವನ ಉಪದೇಶದಿಂದ ಪರಿಹಾರವನ್ನು ಕಾಣುತ್ತಿದ್ದರು. ಈತನು ವಾವೆಯಲ್ಲಿ ಧೃತರಾಷ್ಟ್ರನ ಸೋದರ, ದೊಡ್ಡವಿದ್ಯೆಯ ಆಗರ. ಹಾಗಾಗಿ ಅವನ ಮಾತನಲ್ಲಿ ಸಲಿಗೆ ಇದೆ, ಗಾಢತೆಯು ಇದೆ, ಅಧಿಕಾರವಿದೆ- ' ಸಾವು ಗೆಲವು ವಿಧಿಯ ಅಧೀನ. ಯುದ್ಧಲ್ಲಿ ಪಾಲ್ಗೊಂಡೂ ಬದುಕಿ ಉಳಿದವರು ಇದ್ದಾರೆ, ಹಾಗೆಯೇ ಯುದ್ಧದಲ್ಲಿ ಪಾಲ್ಗೊಳ್ಳದೆ ಮರಣವನ್ನು ಹೊಂದಿದವರೂ ಇದ್ದಾರೆ. ಮನುಜನು ಹುಟ್ಟುವಾಗಲೆ ಸಾವಿನ ದಿನವೂ ನಿಗದಿಯಾಗಿರುತ್ತದೆ. ಮತ್ತು ಹುಟ್ಟುವ ಮುನ್ನ ಜೀವಿಯ ಸುಳಿವು ನಮಗೆ ಇರುವುದಿಲ್ಲ, ಮರಣಾನಂತರದಲ್ಲಿಯೂ ಆತನ ಸುಳಿವು ನಮಗಾಗದು. ಜೀವಿತ ಕಾಲದಲ್ಲಿ ಎರಡು ದಿನಗಳಲ್ಲಿ ಮಾತ್ರ ಆತನ ಒಡನಾಟ. ಇಂತಹ ವ್ಯಕ್ತಿಗಳ ಬಗ್ಗೆ ಯಾಕಿಷ್ಟು ಅಬ್ಬರ? ಮತ್ತೆ ಕ್ಷತ್ರಿಯನು ಯುದ್ಧದಲ್ಲಿ ಮಡಿದಾಗ ಪ್ರಾಪ್ತವಾಗುವ ಉತ್ತಮ ಗತಿಯು ಮತ್ತಾವುದೇ ಯಜ್ಞದಿಂದಾಗಲಿ, ದಾನದಿಂದಾಗಲಿ ಮತ್ತಾವುದೇ ಕರ್ಮದಿಂದಾಗಲಿ ಸಿಗದು, ಹೀಗಿರುವಾಗ ತಿಳಿಯದವರಂತೆ ರೋದಿಸುವುದು ತರವೆ?

ಶ್ರೀವ್ಯಾಸರು ವಾವೆಯಲ್ಲಿ ತಂದೆ, ಸರ್ವಜ್ಞರು- ನೀನು ಗಮನಿಸಿದಂತೆ ವಿದುರನು ಈ ಯುದ್ಧವನ್ನು ನಿಲ್ಲಿಸ ಬೇಕೆಂದು ಎಲ್ಲ ವಿಧದಲ್ಲಿಯೂ ಯತ್ನಿಸಿದ. ಆದರೆ ಫಲಿಸಿತೆ? ನಿನ್ನ ಪುತ್ರನನ್ನು ಭೂಭಾರಹರಣಕ್ಕಾಗಿಯೇ ವಿಧಿಯು ಸೃಷ್ಟಿಸಿದೆ. ಭಾರದಿಂದ

ಆರ್ತಳಾದ ಭೂಮಿಯು ತನ್ನ ದುಃಖದ ನಿವೃತ್ತಿಗಾಗಿ ದೇವತೆಗಳಲ್ಲಿ ಪ್ರಾರ್ಥಿಸಿದಳು. ಆಗ ನಾರಾಯಣನು ಹೇಳಿದನು 'ನಿನ್ನ ದುಃಖವನ್ನು ದುರ್ಯೋಧನನು ಪರಿಹರಿಸಲಿದ್ದಾನೆ, -

**ಧೃತರಾಷ್ಟ್ರಸ್ಯ ಪುತ್ರಾಣಾಂ ಯಸ್ತು ಜ್ಯೇಷ್ಠಃ ಶತಸ್ಯ ವೈ ।**
**ದುರಯೋರ್ಧನ ಇತಿ ಖ್ಯಾತಃ ಸ ತೇ ಕಾರ್ಯಂ ಕರಿಷ್ಯತಿ ॥**

ಆತನಿಗೆ ಈ ಕಾರ್ಯದಲ್ಲಿ ಸಹಾಯಕ್ಕಾಗಿ ಶಕುನಿ ಕರ್ಣ ದುಃಶಾಶನ ಮುಂತಾದವರು ಇದ್ದಾರೆ ನೀನು ಚಿಂತಿಸದಿರು' ಎಂದು. ಆಗ ನಾನೂ ಅಲ್ಲಿದ್ದೆ. ಈ ವಿಷಯವನ್ನು ಧರ್ಮನಂದನನು ನಾರದರಿಂದ ತಿಳಿದಿದ್ದನು. ಆತನೂ ಸಹ ಯುದ್ಧವನ್ನು ನಿಲ್ಲಿಸಲು ತುಂಬ ಯತ್ನಿಸಿದ, ಆದರೆ ಫಲಿಸಲಿಲ್ಲ. ಕುಲದ ಕ್ಷಯಕ್ಕಾಗಿಯೇ ವಿಧಿಯು ನಿನ್ನ ಪುತ್ರನನ್ನು ಹುಟ್ಟಿಸಿದೆ. ಹೀಗಿರುವಾಗ ಮನುಜಯತ್ನವು ಅದರ ಮುಂದೆ ನಡೆಯದು. ನೀನು ಎಲ್ಲವನ್ನು ಬಲ್ಲವ. ಇಂತಹ ಶಾಸ್ತ್ರದ ಪರಿಚಯವು ಇಲ್ಲ ಎಂದಿಲ್ಲ. ಹೀಗಿರುವಾಗ ರೋದಿಸುವುದರಿಂದ ಯಾವ ಪುರುಷಾರ್ಥವನ್ನು ಹೊಂದುವಿ? ಎಂದು. ಇಲ್ಲಿ ದೈವದ ರಹಸ್ಯ ದೇವಲೋಕದ ಸುದ್ದಿಯನ್ನು ವ್ಯಾಸರು ಹೇಳುತ್ತಿದ್ದಾರೆ. ಹೀಗೆ ಮಹಾಭಾರತದಲ್ಲಿ ಆ ವ್ಯಕ್ತಿಗಳು ಆಡುವಮಾತು ಅವರ ವ್ಯಕ್ತಿತ್ವದ ಕನ್ನಡಿಯಾಗಿರುವುದನ್ನು ಇಲ್ಲಿ ಕಾಣಬಹುದಾಗಿದೆ.

ಮೃತರಿಗಾಗಿ ಅವರ ಅನುಬಂಧಿಗಳು ರೋದಿಸುವುದನ್ನು ಈ ಪರ್ವದಲ್ಲಿ ಮುಖ್ಯವಾಗಿ ವರ್ಣಿಸಲಾಗಿದೆ, ಕರುಣಾರಸದ ಆವಿಷ್ಕಾರವನ್ನು ವಾಚಕರು ಕಾಣಬಹುದಾಗಿದೆ. ಸಾಮಾನ್ಯವಾಗಿ ಮರಣಾನಂತರದಲ್ಲಿ ಮೃತಾನುಬಂಧಿಗಳು ರೋದಿಸುವ ಸಂದರ್ಭಗಳನ್ನು ಅನೇಕ ಪುರಾಣ ಕಾವ್ಯಗಳಲ್ಲಿ ಇರಬಹುದು, ಅಲ್ಲಿ ಕರುಣಾರಸದ ಅಭಿವ್ಯಕ್ತಿಗೆ ಬೇಕಾದ ಸಂಭಾಷಣೆಗಳೂ ಇರಬಹುದು, ಆದರೆ ಪ್ರಕೃತದಲ್ಲಿಯ ಸನ್ನಿವೇಶವೇ ಅದ್ಭುತ. ತನ್ನ ಗಂಡನಿಗೆ ಇಲ್ಲದ ದರ್ಶನ ಭಾಗ್ಯ ತನಗೇಕೆ? ಎಂದು ಕಣ್ಣಿಗೆ ವಸ್ತ್ರವನ್ನು ಬಿಗಿದು ಹೊರ ಪ್ರಪಂಚವನ್ನು ತನ್ನ ಕಣ್ಣುಗಳಿಂದ ಹತ್ತಾರು ವರ್ಷಗಳಿಂದ ಕಾಣದ ಗಾಂಧಾರಿದೇವಿಯು ಇಂದು ವ್ಯಾಸರ ವರವಿಶೇಷದಿಂದ (ಅಥವಾ ಶಾಪವಿಶೇಷದಿಂದಲೋ) ದಿವ್ಯದೃಷ್ಟಿಯನ್ನು ಹೊಂದಿರುವಳು. ಸಮಗ್ರ ರಣರಂಗವನ್ನು ಆಕೆ ಕಾಣುತ್ತಿದ್ದಾಳೆ. ಯಾರ ದೇಹವು ಎಲ್ಲಿದೆ, ಯಾವ ಅವಸ್ಥೆಯಲ್ಲಿದೆ, ಆ ದೇಹದಿಂದ ತುಂಡಾಗಿ ಬೇರೆಲ್ಲೋ ಬಿದ್ದಿರುವ

ರುಂಡ ಮುಂಡ ಮುಂತಾದವು ಎಲ್ಲಿ ಬಿದ್ದಿವೆ, ಯಾರಿಂದ ಮೃತರಾದರು, ಹೇಗೆ ಮೃತರಾದರು, ಮೃತರ ಅನುಬಂಧಿಗಳು ಯಾರು, ಅವರ ಮನದಲ್ಲಿ ಆಗುತ್ತಿರುವ ತುಮುಲವೇನು ಈ ಮುಂತಾದವು ಎಲ್ಲವನ್ನೂ ಆಕೆ ಕಾಣುತ್ತಿದ್ದಾಳೆ. ಅದರಲ್ಲೂ ಜೀವನದ ಕೊನೆಯಲ್ಲಿರುವ ಕಣ್ಣುಗಳನ್ನು ಹೊಂದಿರದ ಆಕೆಯು ತನ್ನ ನೂರೂ ಮಕ್ಕಳನ್ನು ಕಳೆದುಕೊಂಡಿರುವಳು, ಆ ರಣರಂಗದಲ್ಲಿ ಆಕೆಯ ನೂರಾರು ಸೊಸೆಯರು ರೋದಿಸಿತ್ತರುವರು, ಗಾಂಧಾರಿಗೆ ಏಕ ಮಾತ್ರ ಪುತ್ರಿ, ಸೈಂಧವನ ಪತ್ನಿ ದುಃಶಲಾ, ಆಕೆಯೂ ಈಗ ವಿಧವೆ , ಆಕೆಯು ತನ್ನ ಗಂಡನ ತಲೆಯನ್ನು ಆ ಭೀಕರ ರಣರಂಗದಲ್ಲಿ ತಪಾಸಾಣೆ ಮಾಡುತ್ತಿರುವಳು. ಹೀಗೆ ಎಲ್ಲರ ದುಃಖವನ್ನೂ ತನ್ನ ಒಡಲಲ್ಲಿ ತುಂಬಿಕೊಳ್ಳುತ್ತಿರುವಳು. ದುಃಖವು ಉಂಬಳಿಸಿ ಉಂಬಳಿಸಿ ಹೊರಹೊಮ್ಮುತ್ತಿದೆ. ಇಲ್ಲಿ ಕರುಣಾರಸದ ಪರಾಕಾಷ್ಟವನ್ನು ಶ್ರೀವ್ಯಾಸರು ವಾಚಕರಿಗೆ ವಿಶಿಷ್ಠವಾಗಿ ಉಣಬಡಿಸಿರುವರು. ಇಂತಹ ಕಥಾಹಂದರವು ಮತ್ತೆಲ್ಲೂ ಸಿಗಲಾರದು. ಇಂತಹ ಸಾವಿರಾರು ಸನ್ನಿವೇಶಗಳನ್ನು ಮಹಾಭಾರತದಲ್ಲಿ ಹೆಣೆದು ಪರತತ್ವ ಮತ್ತು ಧರ್ಮದ ಉಪದೇಶವು ಇಲ್ಲಿರುವುದರಿಂದ, ಮಹಾಭಾರತವನ್ನು ಓದಿದವರು ಅಂದರು ' ಕೋ ಹ್ಯನ್ಯಃ ಪುಂಡರೀಕಾಕ್ಷಾದ್ ಮಾಹಾಭಾರತಕೃದ್ಭವೇತ್' ಎಂದು.

ಸಮಗ್ರ ಮಹಾಭಾರತದ ಯುದ್ಧವನ್ನು ಮೆಲುಕಾಡುವ ಗಾಂಧಾರಿದೇವಿಯು ಶ್ರೀಕೃಷ್ಣನನ್ನು ಮತ್ತು ಭೀಮಸೇನನ್ನು ಆಕ್ಷೇಪಿಸುವಳು. ಗಾಂಧಾರಿಯ ಮಾತನ್ನು ಆಲಿಸಿದಾಗ 'ಅಪಶ್ಯತಾಮ್ ಆತ್ಮತತ್ವಮ್- ತನ್ನತನವನ್ನು ಅರಿಯದ' 'ಆತ್ಮಾನಂ ಬಹುಮನ್ಯತೇ- ತಾನು ಮಹಾಪುರುಷ' ಎಂದೇ ಎಲ್ಲ ಮನುಜರು ಭಾವಿಸಿಕೊಳ್ಳುವರು' ಎನ್ನುವ ಶ್ರೀಮದ್ಭಾಗವತದ ಮಾತು ನೆನಪಿಗೆ ಬರುವುದು.

'ಕೃಷ್ಣ! ಯುದ್ಧವನ್ನು ತಪ್ಪಿಸುವ ಎಲ್ಲ ಸಾಮರ್ಥ್ಯವು ನಿನಗಿದ್ದರೂ ಈ ಭೀಕರ ಜ್ಞಾತಿನಾಶವನ್ನು ಏಕೆ ತಪ್ಪಸಲಿಲ್ಲ? ಆದ್ದರಿಂದ 'ನಿನ್ನ ಅನುಬಂಧಿಗಳಾದ ಎಲ್ಲ ಯಾದವರು ಭೋಜರು ಮಾಧವರು ಇದೇ ರೀತಿಯಾಗಿ ಪರಸ್ಪರಕಲಹದಿಂದ ಸಾವನ್ನು ಕಾಣಲಿ, ಅವರ ಹೆಂಡಂದಿರೂ ವಿಧೆಯರಾಗಿ ರೋದಿಸಲಿ'' ಎಂದು ಶಪಿಸುವಳು. ಪತಿವ್ರತೆಯಾದ ಧರ್ಮಭೀರುವಾದ ಆಕೆಯ ಮಾತಿನಂತೆ ಮುಂದೆ ಯಾದವರು ಅದೇ ರೀತಿಯಲ್ಲಿ ಸಾವನ್ನು ಕಾಣುವರು. ಇದರಿಂದ ಕೃಷ್ಣನನ್ನು ಅಪರಾಧಿಸ್ಥಾನದಲ್ಲಿ ತಂದು ನಿಲ್ಲಿಸಿದಂತೆ ತೋರುವುದು. ಆದರೆ ಹದ್ದುಮೀರಿ ವರ್ತಿಸುತ್ತಿದ್ದ ತನ್ನ ಮಗನನ್ನು ಈ ವೃದ್ಧದಂಪತಿಗಳು ತಮ್ಮ ಸುಪರ್ದಿನಲ್ಲಿ

ಇಟ್ಟಿಕೊಳ್ಳಲಾಗದೆ, ವಾವೆಯಲ್ಲಿ ಹೊರಗಿನವನಾದ ಸಂಧಿಗಾಗಿ ಹಸ್ತಿನೆಗೆ ಆಗಮಿಸಿ ಪ್ರಯತ್ನಿಸಿದ್ದ ಕೃಷ್ಣನನ್ನು ಈ ಅನರ್ಥಕ್ಕೆ ಗುರಿಯಾಗಿಸುವುದು ಎಷ್ಟು ಸಮಂಜಸ? ಕುರುಕುಲಪಿತಾಮಹ ಭೀಷ್ಮ, ಈ ಸಮಗ್ರ ಕ್ಷತ್ರಿಯರ ಗುರು ದ್ರೋಣ ಈ ಮುಂತಾದವರು ಈ ಅನರ್ಥಕ್ಕೆ ಮುಖ್ಯಹೊಣೆಗಾರರು. ಎಲ್ಲದಕ್ಕೂ ಮಿಗಿಲಾಗಿ ಮಹಾಸ್ವಾರ್ಥಿಗಳು ವೃದ್ಧಾತಿಕ್ರಮಿಗಳು ನೀತಿಬಾಹಿರರೂ ಆದ ಈಕೆಯ ಪುತ್ರರು ಅನ್ಯರ ಮಾತನ್ನು ಒಪ್ಪುವ ಜಾಯಮನದವರೆ? ಈ ಅನರ್ಥಕ್ಕೆ ಮುಖ್ಯಕಾರಣನಾದ ಈಕೆಯ ಸಾಕ್ಷಾತ್ ಸಹೋದರನಾದ ಶಕುನಿ. ಇವರೆಲ್ಲರನ್ನೂ ಮರೆತು ಗಾಂಧಾರಿಯು ಕೃಷ್ಣನನ್ನು ಅಪರಾಧಿ ಎಂದು ದೂರುತ್ತಿರುವಳು.

ದುರ್ಯೋಧನನ ತೊಡಗೆ ಪೆಟ್ಟಿತ್ತು ಸಂಹರಿಸಿದ್ದು ಧರ್ಮವೇ? ದುಃಶಾಸನನ ರಕ್ತನ್ನು ಪಾನಮಾಡಿದ್ದು ಸರಿಯೇ? ಜೀವನದ ಸಂಜೆಯಲ್ಲಿರುವ ಅಂಧದಂಪತಿಗಳಿಗೆ ಊರುಗೋಲಾಗಿ ನೂರು ಮಾಂದಿ ಮಕ್ಕಳಲ್ಲಿ ಓರ್ವನನ್ನಾದರೂ ಉಳಿಸಬಹುದಿತ್ತಲ್ಲವೇ? ಅಹುದು ಎಲ್ಲ ನನ್ನ ಪುತ್ರರೂ ನಿಮಗೆ ತುಂಬಾ ದ್ರೋಹವನ್ನು ಬಗೆದಿರುವರು ಎನ್ನುವುದನ್ನು ಒಪ್ಪುವೆ, ಆದರೆ ನಮ್ಮ ಮೆಲಿನ ಕರುಣೆಯಿಂದಲಾದರೂ ಆ ನೂರು ಮಂದಿಯಲ್ಲಿ ಕಡಿಮೆ ತಪ್ಪನ್ನು ಎಸಿಗಿದ ಯಾರಾದರೂ ಒಬ್ಬನನ್ನಾದರೂ ಬಿಡಬಹುದಿತ್ತಿಲ್ಲವೆ? ಎಂದು ಗಾಂಧಾರಿದೇವಿಯು ಭೀಮನನ್ನು ಆಕ್ಷೇಪಿಸುತ್ತಾಳೆ. ಗಾಂಧಾರಿಯ ಈ ಮಾತಿನಿಂದ ಎಂತಹ ಕಲ್ಲುಹೃದಯವೂ ಕರಗುವುದು. ಭೀಮನನ್ನು ಅತ್ಯಂತನಿಷ್ಕರುಣಿಯನ್ನಾಗಿ ವಾಚಕರು ಭಾವಿಸುವಂತಾಗುವುದು.

ತಂದೆಯಿಲ್ಲದ ಅನಾಥ ಮಕ್ಕಳು ಪಾಂಡವರು ಆಸರೆಯನ್ನು ಬಯಸಿ ದೊಡ್ಡಪ್ಪನನ್ನು ಅರಸಿ ಬಂದಾಗ ಈತನ ಪುತ್ರರು ವಿಷವಿಕ್ಕಿ, ಬೆಂಕಿಯನ್ನಿಟ್ಟು ಸಂಹರಿಸಲು ಯತ್ನಿಸಿದರು, ತುಂಬಿದ ಸಭೆಯಲ್ಲಿ ಇವರ ಪತ್ನಿಯನ್ನು ಅಪಮಾನಿಸಲು ಯತ್ನಿಸಿದರು, ದ್ರೌಪದಿ! ನಿನ್ನ ಗಂಡಂದಿರು ಎಣ್ಣೆತೆಗೆದ ಷಂಡತಿಲವಿದ್ದಂತೆ ಎಂದುರು, ಅವರ ಆಸ್ತಿಯನ್ನು ಕಸಿದಿಕೊಂಡು ಅಡವಿಪಾಲು ಮಾಡಿದರು, ಕಾಡಿಗೆ ಹೊರಟಾಗ ಅವರ ಧ್ವನಿ-ನಡಿಗೆಗಳನ್ನು ಅನುಕರಿಸಿ ಅಪಹಾಸ್ಯ ಮಾಡಿದರು, ಐದು ಗ್ರಾಮವನ್ನು ಕೇಳಿದರೂ ಸೂಜಿಯ ಮೊನೆಯಷ್ಟೂ ಸ್ಥಳವಿಲ್ಲ ಎಂದರು, ವಂಚಿಸಿ ಪಾಂಡವರ ಅನುಬಂಧಿಗಳನ್ನು ತಮ್ಮಡೆ ಸೆಳೆದುಕೊಂಡು ಸೇನೆಯನ್ನು ಬೆಳೆಸಿಕೊಂಡರು. ಹೀಗೆ ಕೌರವರ ತಪ್ಪಿನ ಪಟ್ಟಿಯು ಬೆಳೆಯುವುದು. ಇಂತಹ ತಪ್ಪಿನ ಸರಮಾಲೆಯ ಯಾವ

ಸಂದರ್ಭದಲ್ಲೂ ತನ್ನ ಮಕ್ಕಳನ್ನು ಹದ್ದುಬಸ್ತಿನಲ್ಲಿ ಇಟ್ಟುಕೊಳ್ಳದ, ವಿದುರ ವ್ಯಾಸ ನಾರದ ಭೀಷ್ಮ ಮುಂತಾದ ಹಿರಿಯರ ತಿಳಿದವರ ಹಿತಬಯಸುವವರ ಮಾತನ್ನು ಅತಿಕ್ರಮಿಸಿ, ಈಗ ಪರಿತಪಿಸಿ ಭೀಮನನ್ನು ನಿಷ್ಕರುಣಿ ಎನ್ನುವುದು ಸರಿಯೆ? ವ್ಯಾಸರು ಗಾಂಧಾರಿದೇವಿಯನ್ನೇ ಪ್ರಶ್ನಿಸುವರು 'ಆಶೀರ್ವದಿಸು ಎಂದು ಬೇಡಿದ ನಿನ್ನ ಮಗನಿಗೆ 'ಯತ್ರ ಧರ್ಮಸ್ತತೋ ಜಯಃ' ಎಂದು ಹೇಳಿ, ನಿರಾಶನನ್ನಾಗಿಸಿ ಕಳುಹಿಸಿದ ನೀನು, ಈಗ ಜಯಸಿದ ಪಾಂಡವರನ್ನು ಧರ್ಮಬಾಹಿರರನ್ನಾಗಿ ಕಾಣುತ್ತಿರುವಿ. ನಿನ್ನ ಹಿಂದಿನ ನಿಲುವನ್ನು ನೆನಪಿಸಿಕೊ' ಎಂದು. ಆದಕೆಂದೇ ಮಹಾಭಾರತವು ಹೇಳುತ್ತದೆ 'ಪಾಪಸ್ಯ ಫಲಂ ನೇಚ್ಛಂತಿ ಪಾಪಂ ಕುರ್ವಂತಿ ಮಾನವಾಃ' ಎಂದು. ಈ ಒಂದು ವ್ಯಾಸರ ಪ್ರಶ್ನೆಯು ಸಮಗ್ರ ಯುದ್ಧದಲ್ಲಿ ಕೃಷ್ಣನು ಮಾಡಿದ ತಂತ್ರಗಳು, ಪಾಂಡವರ ನಿಲುವು, ಭೀಮನ  ನಡಿಗೆ ಇವೆಲ್ಲವೂ ಧರ್ಮದ ಚೌಕಟ್ಟಿನಲ್ಲವೆ ಎಂದು ಸಮರ್ಥಿಸುತ್ತದೆ.

ರಕ್ತದ ಗುಣ- ಯುದ್ಧಾನಂತರದಲ್ಲಿ ದೊಡ್ಡಪ್ಪ ಮತ್ತು ದೊಡ್ಡಮ್ಮನಿಗೆ ನಮಿಸಲು ಬಂದರು  ಪಾಂಡವರು. ಧೃತರಾಷ್ಟ್ರನು ಭೀಮನನ್ನು ಅಪ್ಪಿ-ಹಿಸುಕಿ ಸಂಹರಿಸಲು ಬಯಸಿದ್ದನು.ಆದರೆ ಕೃಷ್ಣನು ತನ್ನ ತಂತ್ರದಿಂದ ವಿಫಲಗೊಳಿಸಿದನು (ಧೃತರಾಷ್ಟ್ರನು ಯಶಸ್ವಿಯಾಗುತ್ತಿದ್ದನೊ ಇಲ್ಲವೋ ಅದು ಬೇರೇ ವಿಷಯ). ಗಾಂಧಾರಿಯು ಶಾಪವನ್ನೀಯಲು ಹವಣಿಸುತ್ತಿದ್ದಳು. ಆದರೆ ಆಗ ವ್ಯಾಸರು ಉಪದೇಶಿಸಿ ತಪವನ್ನು ಹಾನಿಗೊಳಿಸಕೊಳ್ಳುವುದು ಬೇಡ ಎಂದು ತಿಳಿಹೇಳಿದರು. ಆದರೂ ಕಣ್ಣಿಗೆ ಕಟ್ಟಿದ ಬಟ್ಟೆಯ ಸಂದಿನಲ್ಲಿ ಧರ್ಮನಂದನನ ತುದಿಗಾಲನ್ನು ಕಂಡ ಆಕೆ ಆತನ ಉಗರಿನ ಬಣ್ಣವನ್ನು ಕೆಡಿಸಿ, ತನ್ನ ಅಂತರಂಗದ ಬಣ್ಣವನ್ನು ಬಯಲು ಮಾಡಿಕೊಂಡಳು. ದರಿಂದ ಈ ದಂಪತಿಗಳು ಅಂತರಂಗದಲ್ಲಿ ಎಷ್ಟು ಆಮರ್ಷವನ್ನು ತುಂಬಿಕೊಂಡೊದ್ದರು ಎಂದು ತಿಳಿದಂತಾಗುವುದು. 'ಮಾತಾಪಿತೃಗಳ ರಕ್ತದ ಗುಣಗಳನ್ನು ಮಕ್ಕಳಲ್ಲಿ ಕಾಣಬಹುದು' ಎಂದು ತಿಳಿದವರು ಹೇಳುವರು. ಹಾಗಾಗಿ ದುರ್ಯೋಧನಾದಿಗಳಲ್ಲಿದ್ದ ದ್ವೇಷ ಅಮರ್ಷ ಸ್ವಾರ್ಥ ಮುಂತಾದ ದುರ್ಗುಣಗಳ ಮೂಲ ಬೀಜವು ಈ ತಂದೆತಾಯಿಯರಲ್ಲಿ ಇದ್ದಿರಬಹುದಲ್ಲವೆ?

ಶ್ರೀಮದಾಚಾರ್ಯರ ಉಪದೇಶ- ಬಲರಾಮ, ಅಶ್ವತ್ಥಾಮ, ಗಾಂಧಾರಿಯಿಂದಾರಂಭಿಸಿ ಪಾಂಡವರ ನಡೆಯ ಬಗ್ಗೆ ಶಂಕಿಸುವ ಸಮಸ್ತರ ಸಮಸ್ತ ಸಂದೇಹಗಳಿಗೆ ಆಚಾರ್ಯರು ಉತ್ತರಿಸಿರುವರು. ಪೈಂಗಿಶ್ರುತಿಯ ಅಭಿಮತವನ್ನು ತಿಳಿಸುತ್ತಾ-

'ನಿಕೃತ್ಯಾ ನಿಕೃತಿಂ ಹಾನ್ಯಾನ್ನಿಕೃತ್ಯಾ ನೈವ ಧಾರ್ಮಿಕಾನ್- ಮೋಸಗಾರರನ್ನು ಮೋಸದಿಂದಲೇ ನಿಗ್ರಹಿಸಬೇಕು, ಧಾರ್ಮಿಕರಲ್ಲಿ ವಂಚನೆ ಸಲ್ಲದು' (ತಾ.ನಿ.28.215)

ದುಃಶಾಸನನ ರಕ್ತವನ್ನು ಪಾನಮಾಡಲಿಲ್ಲ, ಪಾನಮಾಂಡಿದಂತೆ ನಟಿಸಿದೆ. ಇದಕ್ಕೆ ಸಾಕ್ಷಿಯಾಗಿ ಕರ್ಣನಿರುವನು , ಈ ನಟನೆಯಾದರೂ ಪ್ರತಿಜ್ಞೆಯ ಪಾಲನೆಗಾಗಿ, ಪ್ರತೀಕಾರಕ್ಕಾಗಿ, ತಪ್ಪೆಸಗುವರಿಗೆ ಎಚ್ಚರಿಕೆಗಾಗಿ ಎನ್ನುತ್ತಾನೆ ಭೀಮನು. (ತಾ.ನಿ.28.217,218.)

'ಸರ್ವೈಃ ಸಮೇತ್ಯೈಃ ಕೃಷ್ಣಸ್ಯ ಬಂಧನಾಯ ವಿನಿಶ್ಚಿತಮ್' - ಕೃಷ್ಣನು ಸಂಧಾನಕ್ಕೆಂದು ಹಸ್ತಿನೆಗೆ ಬಂದಾಗ ಕೌರವರೆಲ್ಲರೂ ಒಟ್ಟು ಸೇರಿ ಕೃಷ್ಣನ ಬಂಧನಕ್ಕೆ ಮಸಲತ್ತು ಮಾಡಿದ್ದರು. ಕೃಷ್ಣನು ಧರ್ಮೋಪದೇಶವನ್ನು ಮಾಡಿತ್ತಿದ್ದಾಗ ಮಧ್ಯೆ ಮಧ್ಯೆ ದುರ್ಯೋಧನನು ಎದ್ದು ಹೊಗುತ್ತಿದ್ದನು, ಆಗ ಉಳಿದ ಆತನ ಸಹೋದರರು ಆತನನ್ನು ಅನುಸರಿಸಿ ಹೊರಹೋಗುತ್ತಿದ್ದರು. ಇಂತಹ ವಿಷ್ಣುದ್ವೇಷಾದಿಗಳು ಅವರಲ್ಲಿ ಅನೇಕವಿರುವುದರಿಂದ ಯಾರೂ ಕ್ಷಮ್ಯರಲ್ಲ.

ಶ್ರೀವಾದಿರಾಜರ ಅನುಗ್ರಹ- ಸೋದೇರಾಜರು ತಮ್ಮ ಲಕ್ಷಾಲಂಕರದಲ್ಲಿ ನಾವು ಅರ್ಥವಾಗದೆ ತೊಂದರೆಗೆ ಒಳಗಾಗುವ ಸಂದರ್ಭಗಳಲ್ಲಿ ಅನುಗ್ರಹಿಸಿರುತ್ತಾರೆ. ಸ್ತ್ರೀಪರ್ವದ ಮೊದಲ ಅಧ್ಯಾಯದಲ್ಲಿ ಮೂರನೇ ಶ್ಲೋಕದಲ್ಲಿ 'ಶಾಪಶ್ಚಾನ್ಯೋನ್ಯಕಾರಿತಃ' ಎಂದಿದೆ. ಇದು, 'ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ ಅಶ್ವತ್ಥಾಮನಿಗೆ ಶಾಪವು ಪ್ರಾಪ್ತವಾಯಿತು ಅದರ ವಿವರವನ್ನು ತಿಳಿಸಿ' ಎಂದು ಜನಮೇಜಯರಾಜನು ಪ್ರಶ್ನಿಸುವ ಸಂದರ್ಭ. ಈ ಸಂದರ್ಭದಲ್ಲಿ ಕೇವಲ ಅಶ್ವತ್ಥಾಮಾಚಾರ್ಯರಿಗೆ ಶಾಪವಿತ್ತ ಪ್ರಸಂಗವು ಇದೆ ಹೊರತಾಗಿ ಪರಸ್ಪರವಾಗಿ ಶಾಪವಿತ್ತ ಪ್ರಸಂಗವು ಇಲ್ಲ. ಆದರೆ 'ಪರಸ್ಪರವಾಗಿ ಶಾಪವಿತ್ತ ಪ್ರಸಂಗವನ್ನು ತಿಳಿಸಿ' ಎಂದು ಜನಮೇಜಯನು ಪ್ರಶ್ನಿಸಿದಂತೆ ತೋರುವುದು. ಹಾಗಾಗಿ ಲಾಕ್ಷಾಲಂಕಾರಕಾರರು ತಿಳಿಸುತ್ತಾರೆ 'ಶ್ರೀಕೃಷ್ಣನು ಶ್ರೀವ್ಯಾಸರು ಅನ್ಯೋನ್ಯವಾಗಿ ಚರ್ಚಿಸಿ ಇತ್ತ ಶಾಪದ ಪ್ರಸಂಗ' ಎಂದು ಅರ್ಥೈಸಬೇಕೆಂದು ತಿಳಿಸಿರುತ್ತಾರೆ. ಅಂದರೆ 'ಅನ್ಯೋನ್ಯಕಾರಿತಃ' ಎಂಬುವಲ್ಲಿ ಮಧ್ಯಮಪದಲೋಪೀ ಸಮಾಸ ಎಂದು ತಿಳಿಸಿರುವರು.

ಹೀಗೆ ಮುಂದೆ ಇದೇ ಪರ್ವದಲ್ಲಿ ವಿದುರನ ಉಪದೇಶದ ಪ್ರಸಂಗದಲ್ಲಿಎರಡನೇ ಅಧ್ಯಾಯದ ಆರನೇ ಶ್ಲೋಕ- 'ಅಭಾವಾದೀನಿ ಭೂತಾನಿ' 'ಅಭಾವನಿಧನಾನಿ' ಎಂದಿದೆ. ಝುಟಿತಿ ಇಲ್ಲಿಯ ಅಭಾವ ಶಬ್ದಕ್ಕೆ ಅರ್ಥವು ಏನೆಂದು ತಿಳಿಯದು. ರಾಜರು ಇಲ್ಲಿನ ಅಭಾವ ಶಬ್ದಗಳು ಪ್ರಾಗಭಾವ ಮತ್ತು ಪ್ರಧ್ವಂಸಾಭಾವಗಳನ್ನು ತಿಳಿಸುತ್ತದೆ ಎಂದು ತಿಳಿಸುತ್ತಾರೆ. ಹೀಗೆ ಇನ್ನೂ ಅತಿ ಮಹತ್ವದ ಅನೇಕ ವಿಷಯಗಳನ್ನು ನಾವು ಲಾಕ್ಷಾಲಂಕಾರದಲ್ಲಿ ಕಾಣಬಹುದಾಗಿದೆ.

ಪರಮಪೂಜ್ಯ ಪಾರ್ಯಾಯ ಪೀಠಾಧೀಶ್ವರರು ಅತ್ಯಂತ ಕಾರುಣ್ಯದಿಂದ ಶ್ರೀಮಹಾಭಾರತದ ಈ ಭಾಗವನ್ನು ಅನುವಾದಿಸಲು ಅವಕಾಶಮಾಡಿಕೊಟ್ಟಿರುವರು. ನಾನು ವಿದ್ವಾಂಸನೂ ಅಲ್ಲ ಪ್ರಸಿದ್ಧನೂ ಅಲ್ಲ, ಆದರೂ ವೇದವ್ಯಾಸರ ಸೇವೆಗೆ ಅವಕಾಶಮಾಡಿಕೊಟ್ಟು ಅನುಗ್ರಹಿಸಿರುವರು, ಅದಕ್ಕೆ ಕಾರಣ ನನ್ನ ಪೂರ್ವಿಕರಾದ ಬಿದರಹಳ್ಳಿ ಶ್ರೀನಿವಾಸತೀರ್ಥರ ಬಗ್ಗೆ ಪರಮಪೂಜ್ಯರಿಗೆ ಇರುವ ಗೌರವ ಮತ್ತು ನನ್ನ ತೀರ್ಥಪಾದರಾದ ಬಿದರಹಳ್ಳಿಶ್ರೀನಿವಾಸಾಚಾರ್ಯರರನ್ನು ಆದರಿಸಬೇಕೆಂಬ ಸದಾಶಯಗಳು ಎಂದು ಭಾವಿಸಿರುವೆನು. ಹೊರತಾಗಿ ನನ್ನಲ್ಲಿ ಗುರುತಿಸುವಂತಹ ಯಾವಗುಣಗಳು ಇಲ್ಲ. ಈ ಸೇವೆಯು ಗುರುಗಳಿಗೆ ಮೆಚ್ಚಿಕೆಯಾಗಿದ್ದ ಪಕ್ಷದಲ್ಲಿ, ಸದ್ಗುಗುಣಗಳು ಮೈಗೂಡುವಂತೆ ಪರಮಪೂಜ್ಯರು ಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಪರಮಾತ್ಮನಲ್ಲಿ ಪ್ರಾರ್ಥಿಸಲಿ ಎಂದು ವಿನಮ್ರನಾಗಿ ಅನಂತನಮನ ಪೂರ್ವಕವಾಗಿ ಪ್ರಾರ್ಥಿಸುವೆನು.

**ವಿದ್ವಾನ್ ಬಿದರಹಳ್ಳಿ ಕೃಷ್ಣಾಚಾರ್ಯ**

ಪೂರ್ಣಪ್ರಜ್ಞ ಸಂಶೋಧನ ಮಂದಿರ, ಬೆಂಗಳೂರು

# ವಿಷಯಾನುಕ್ರಮಣಿಕೆ

# ಮಹಾಭಾರತ - ಭಾಗ-೨೩

## ಗದಾಪರ್ವ

ಪುಟ ಸಂ.



## ಸೌಪ್ತಿಕ ಪರ್ವ

**ಐಷಿಕ ಪರ್ವ**

★ ★ ★ ★ ★

## ಸ್ತ್ರೀಪರ್ವ

★ ★ ★ ★ ★

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತನರಹರಿರಾಮಕೃಷ್ಣವೇದವ್ಯಾಸಾಯ ನಮಃ ॥

# ಮಹಾಭಾರತ

# ಗದಾಪರ್ವ

## ಹತ್ತೊಂಬತ್ತನೆಯ ಅಧ್ಯಾಯ

ದೇವತೆಗಳು ವರುಣನನ್ನು ಜಲಕ್ಕೆ ಅಧಿಪತಿಯನ್ನಾಗಿ ಅಭಿಷೇಕ ಮಾಡಿದ್ದು. ಬಲರಾಮನು ಅಗ್ನಿತೀರ್ಥ ಮತ್ತು ಕೌಬೇರತೀರ್ಥಕ್ಕೆ ಹೋದದ್ದು ಮತ್ತು ಅವುಗಳ ಮಹಿಮೆಯ ವರ್ಣನೆ. ಬಲರಾಮನು ಬದರಪಾಚನತೀರ್ಥಕ್ಕೆ ಹೋದದ್ದು. ಶ್ರುತಾವತೀ ಮತ್ತು ಅರುಂಧತಿಯರ ಮಹಿಮಾವರ್ಣನೆ.

**ಜನಮೇಜಯಃ**

**ಅತ್ಯದ್ಭುತಮಿದಂ ಬ್ರಹ್ಮನ್ ಶ್ರುತವಾನಸ್ಮಿ ತತ್ತ್ವತಃ ॥೧॥**

ಜನಮೇಜಯ– ಬ್ರಹ್ಮಜ್ಞಾನಿಯೇ! ನಾನು ಬಹಳ ಅದ್ಭುತವಾದ ವಿಷಯಗಳನ್ನು ಯಥಾರ್ಥವಾಗಿ ನಿನ್ನಿಂದ ಕೇಳಿ ತಿಳಿದೆನು.

**ಅಭಿಷೇಕಂ ಕುಮಾರಸ್ಯ ದೈತ್ಯಾನಾಂ ಚ ವಧಂ ತಥಾ ।**
**ಶ್ರುತ್ವಾ ಮೇ ಪರಮಾ ಪ್ರೀತಿರ್ಭೂಯಃ ಕೌತೂಹಲಂ ಹಿ ಮೇ ॥೨॥**

ಕುಮಾರನ ಪಟ್ಟಾಭಿಷೇಕ, ದೈತ್ಯರ ವಧೆ ಇವನ್ನು ಕೇಳಿ ನನಗೆ ಪುನಃ ಆನಂದ ಮತ್ತು ಕುತೂಹಲವು ಉಂಟಾಗಿದೆ.

ಅಪಾಂಪತಿಃ ಕಥಂ ಹ್ಯಸ್ಮಿನ್ನಭಿಷಿಕ್ತಃ ಕದಾ ಸುರೈಃ ।
ತನ್ಮೇ ಬ್ರೂಹಿ ಮಹಾಪ್ರಾಜ್ಞ ಕುಶಲೋ ಹ್ಯಸಿ ಸತ್ತಮ ॥೩॥

ಮಹಾಜ್ಞಾನಿಯೇ! ದೇವತೆಗಳು ನೀರಿನೊಡೆಯನಾದ ವರುಣನಿಗೆ ಇಲ್ಲಿ ಹೇಗೆ ಮತ್ತು ಯಾವಾಗ ಪಟ್ಟದಲ್ಲಿ ಅಭಿಷೇಕವನ್ನು ಮಾಡಿದರು? ನೀನು ಇದನ್ನು ಹೇಳಲು ಸಮರ್ಥನಾಗಿರುವಿ.

ವೈಶಂಪಾಯನಃ

ಶೃಣು ರಾಜನ್ನಿದಂ ಚಿತ್ರಂ ಪೂರ್ವಕಾಲೇ ಯಥಾಽಭವತ್ ॥೪॥

ವೈಶಂಪಾಯನ– ರಾಜನೇ! ಹಿಂದಿನ ಕಾಲದಲ್ಲಿ ನಡೆದ ವಿಚಿತ್ರವಾದ ಘಟನೆಯನ್ನು ಯಥಾವತ್ತಾಗಿ ಕೇಳು.

ಆದೌ ಕೃತಯುಗೇ ತಸ್ಮಿನ್ ವರ್ತಮಾನೇ ಯಥಾವಿಧಿ ।
ವರುಣಂ ದೇವತಾಃ ಸರ್ವಾಃ ಸಮೇತ್ಯೇದಮಥಾಬ್ರುವನ್ ॥೫॥

ಕೃತಯುಗದ ಪ್ರಾರಂಭದಲ್ಲಿ ಎಲ್ಲಾ ದೇವತೆಗಳು ಒಟ್ಟಾಗಿ ವರುಣನನ್ನು ಸಮೀಪಿಸಿ ಹೀಗೆ ಹೇಳಿದರು.

ದೇವಾಃ

ಯಥಾಽಸ್ಮಾನ್ ಸುರರಾಟ್ ಶಕ್ರೋ ಭಯೇಭ್ಯಸ್ತ್ರಾತಿ ಸರ್ವದಾ ।
ತಥಾ ತ್ವಮಪಿ ಸರ್ವಾಸಾಂ ಸರಿತಾಂ ವೈ ಪತಿರ್ಭವ ॥೬॥

ದೇವತೆಗಳು– ಯಾವ ರೀತಿಯಲ್ಲಿ ದೇವೇಂದ್ರನಾದ ಇಂದ್ರನು ನಮ್ಮನ್ನು ಭಯದಿಂದ ರಕ್ಷಿಸುತ್ತಾನೆಯೋ ಹಾಗೆಯೇ ನೀನೂ ಕೂಡ ಎಲ್ಲಾ ನದಿಗಳಿಗೆ ಅಧಿಪತಿಯಾಗು.

ವಾಸಶ್ಚ ತೇ ಸದಾ ದೇವ ಸಾಗರೇ ಮಕರಾಲಯೇ ।
ಸಮುದ್ರೋಽಯಂ ತವ ವಶೇ ಭವಿಷ್ಯತಿ ನದೀಪತಿಃ ॥೭॥

ನೀನು ಯಾವಾಗಲೂ ಮೊಸಳೆಗಳಿಂದ ತುಂಬಿದ ಸಾಗರದಲ್ಲಿ ಆಶ್ರಯವನ್ನು ಪಡೆ. ನದಿಗಳ ಪತಿಯಾದ ಸಮುದ್ರವು ನಿನ್ನ ಅಧೀನದಲ್ಲಿ ಇರುತ್ತದೆ.

**ಸೋಮೇನ ಸಾರ್ಧಂ ತವ ಚ ಹಾನಿರ್ವೃದ್ಧಿರ್ಭವಿಷ್ಯತಿ ॥೮॥**

ಚಂದ್ರನ ವೃದ್ಧಿ ಮತ್ತು ಕ್ಷಯಕ್ಕೆ ಅನುಸಾರವಾಗಿ ನಿನ್ನಲ್ಲಿಯೂ ಉಬ್ಬರ - ಇಳಿತಗಳು ಉಂಟಾಗುವವು.

**ವೈಶಂಪಾಯನಃ**

**ಏವಮಸ್ತ್ವಿತಿ ತಾನ್ ದೇವಾನ್ ವರುಣೋ ವಾಕ್ಯಮಬ್ರವೀತ್ ॥೯॥**

**ವೈಶಂಪಾಯನ–** ಹಾಗೆಯೇ ಆಗಲಿ ಎಂದು ವರುಣನು ದೇವತೆಗಳಿಗೆ ಹೇಳುತ್ತಾನೆ.

**ಸಮಾಗಮ್ಯ ತು ತೇ ಸರ್ವೇ ವರುಣಂ ಸಾಗರಾಲಯಮ್ ।**
**ಅಪಾಂಪತಿಂ ಪ್ರಚಕ್ರುರ್ಹಿ ವಿಧಿದೃಷ್ಟೇನ ಕರ್ಮಣಾ ॥೧೦॥**

ಆ ಎಲ್ಲಾದೇವತೆಗಳು ಬಂದು ಸಾಗರದಲ್ಲಿದ್ದ ವರುಣನನ್ನು ಶಾಸ್ತ್ರೋಕ್ತ ಕ್ರಿಯೆಗಳಿಂದ ಜಲಾಧಿಪತಿಯನ್ನಾಗಿ ಅಭಿಷೇಕಮಾಡಿದರು.

**ಅಭಿಷಿಚ್ಯ ತತೋ ದೇವಾ ವರುಣಂ ಪಯಸಾಂ ಪತಿಮ್ ।**
**ಸ್ವಾನ್ಯೇವ ಜಗ್ಮುಃ ಸ್ಥಾನಾನಿ ಪೂಜಯಿತ್ವಾ ಜಲೇಶ್ವರಮ್ ॥೧೧॥**

ದೇವತೆಗಳು ವರುಣನನ್ನು ಜಲಾಧಿಪತಿಯನ್ನಾಗಿ ಅಭಿಷೇಕ ಮಾಡಿ, ಅವನನ್ನು ಪೂಜಿಸಿ ತಾವು ತಮ್ಮ ತಮ್ಮ ಸ್ಥಾನಗಳಿಗೆ ಹೋದರು.

**ಅಭಿಷಿಕ್ತಸ್ತತೋ ದೇವೈಃ ವರುಣೋಽಪಿ ಮಹಾಯಶಾಃ ।**
**ಸರಿತಃ ಸಾಗರಾಂಶ್ಚೈವ ನದಾಂಶ್ಚೈವ ಸರಾಂಸಿ ಚ ॥೧೨॥**

**ಪಾಲಯಾಮಾಸ ವಿಧಿನಾ ಯಥಾ ದೇವಾನ್ ಶತಕ್ರತುಃ ॥೧೩॥**

ಅನಂತರ ದೇವತೆಗಳಿಂದ ಅಭಿಷಿಕ್ತನಾದ, ಮಹಾಕೀರ್ತಿವಂತನಾದ ವರುಣನು ನದಿಗಳನ್ನು, ಸಾಗರಗಳನ್ನು, ನದಗಳನ್ನು ಮತ್ತು ಸರೋವರಗಳನ್ನು, ಇಂದ್ರನು ದೇವತೆಗಳನ್ನು ಪಾಲಿಸಿದಂತೆ ಪಾಲಿಸಿದನು.

**ತತಸ್ತತ್ರಾಪ್ಯುಪಸ್ಪೃಶ್ಯ ದತ್ತ್ವಾ ಚ ವಿವಿಧಂ ವಸು ।**
**ಅಗ್ನಿತೀರ್ಥಂ ಮಹಾಪ್ರಾಜ್ಞೋ ಜಗಾಮಾಥ ಪ್ರಲಂಬಹಾ ॥೧೪॥**

ಪ್ರಲಂಬಾಸುರನನ್ನು ಕೊಂದ ಬಲರಾಮನು ಆ ತೀರ್ಥದಲ್ಲಿ ಆಚಮನಾದಿಗಳನ್ನು ಮಾಡಿ, ವಿವಿಧ ಸಂಪತ್ತನ್ನು ದಾನಮಾಡಿ ಅಲ್ಲಿಂದ ಅಗ್ನಿತೀರ್ಥಕ್ಕೆ ಹೋದನು.

**ನಷ್ಟೋ ನ ದೃಶ್ಯತೇ ಯತ್ರ ಶಮೀಗರ್ಭೋ ಹುತಾಶನಃ ।**
**ಲೋಕಾಲೋಕವಿನಾಶೇ ಚ ಪ್ರಾದುರ್ಭೂತೇ ತದಾ ನೃಪ ॥೧೫॥**

**ಉಪತಸ್ಥುರ್ಮಹಾತ್ಮಾನಂ ಸರ್ವಲೋಕಪಿತಾಮಹಮ್ ॥೧೬॥**

ರಾಜನೇ ! ಹಿಂದೆ ಈ ಅಗ್ನಿತೀರ್ಥದಲ್ಲಿ ಶಮೀಗರ್ಭನಾದ ಅಗ್ನಿಯು ಕಳೆದುಹೋದನು. ಆಗ ಲೋಕಾಲೋಕಗಳು ನಾಶವಾಗಲು ಪ್ರಾರಂಭವಾದಾಗ ದೇವತೆಗಳು ಲೋಕಪಿತಾಮಹನಾದ ಬ್ರಹ್ಮನನ್ನು ಉಪಾಸನೆ ಮಾಡಿದರು.

ದೇವಾಃ

**ಅಗ್ನಿಃ ಪ್ರನಷ್ಟೋ ಭಗವಾನ್ ಕಾರಣಂ ನ ಚ ವಿದ್ಮಹೇ ।**
**ಸರ್ವಲೋಕಕ್ಷಯೋ ಮಾ ಭೂತ್ ಸಂಪಾದಯತು ನೋಽನಲಮ್ ॥**

ದೇವತೆಗಳು– ಪೂಜ್ಯನಾದ ಅಗ್ನಿಯು ಕಳೆದುಹೋಗಿದ್ದಾನೆ. ಕಾರಣವೇನೆಂದು ತಿಳಿಯುತ್ತಿಲ್ಲ. ಸರ್ವಲೋಕವು ನಾಶವಾಗದಿರಲಿ. ನಮಗೆ ಅಗ್ನಿಯನ್ನು ಸಂಪಾದಿಸಿಕೊಡು.

ಜನಮೇಜಯಃ

**ಕಿಮರ್ಥಂ ಭಗವಾನಗ್ನಿಃ ಪ್ರನಷ್ಟೋ ಲೋಕಭಾವನಃ ।**
**ವಿಜ್ಞಾತಶ್ಚ ಕಥಂ ದೇವೈಸ್ತನ್ಮಮಾಚಕ್ಷ್ವ ಪೃಚ್ಛತಃ ॥೧೮॥**

ಜನಮೇಜಯ– ಲೋಕವನ್ನು ರಕ್ಷಿಸುವ ಅಗ್ನಿಯು ಯಾಕಾಗಿ ಕಳೆದುಹೋದನು? ದೇವತೆಗಳು ಅದನ್ನು ಹೇಗೆ ತಿಳಿದುಕೊಂಡರು? ಇದನ್ನೆಲ್ಲವನ್ನು ಪ್ರಶ್ನಿಸುತ್ತಿದ್ದೇನೆ. ನನಗೆ ಹೇಳು.

## ವೈಶಂಪಾಯನಃ

ಭೃಗೋಃ ಶಾಪಭಯಾದ್ ಭೀತೋ ಜಾತವೇದಾಃ ಪ್ರತಾಪವಾನ್ ।
ಶಮೀಗರ್ಭಮಥಾಸಾದ್ಯ ನನಾಶ ಭಗವಾಂಸ್ತತಃ ॥೧೯॥

ವೈಶಂಪಾಯನ– ಭೃಗುವಿನ ಶಾಪದ ಭಯದಿಂದಾಗಿ ಪ್ರತಾಪಿಯಾದ ಅಗ್ನಿಯು ಶಮೀವೃಕ್ಷದ ಒಳಗೆ ಸೇರಿಕೊಂಡು ಕಾಣದಾದನು.

ಪ್ರನಷ್ಟೇ ತು ತದಾ ವಹ್ನೌ ದೇವಾಃ ಸರ್ವೇ ಸವಾಸವಾಃ ।
ಅನ್ವೇಷಯಂಸ್ತದಾ ಸರ್ವೇ ಜ್ವಲನಂ ಭೃಶದುಃಖಿತಾಃ ॥೨೦॥

ಅಗ್ನಿಯು ಅದೃಶ್ಯನಾದಾಗ ಬಹಳದುಃಖಿತರಾದ ಎಲ್ಲಾ ಇಂದ್ರಾದಿದೇವತೆಗಳು ಅವನನ್ನು ಹುಡುಕಾಡಿದರು.

ತತೋಽಗ್ನಿತೀರ್ಥಮಾಗಮ್ಯ ಶಮೀಗರ್ಭಸ್ಥಮೇವ ಹಿ ।
ದದೃಶುರ್ಜ್ವಲನಂ ತತ್ರ ವಸಮಾನಂ ಯಥಾವಿಧಿ ॥೨೧॥

ಅನಂತರ ಅಗ್ನಿತೀರ್ಥಕ್ಕೆ ಬಂದು ಅಲ್ಲಿ ಶಮೀವೃಕ್ಷದ ಒಳಗೆ ವಾಸಿಸುತ್ತಿದ್ದ ಅಗ್ನಿಯನ್ನು ನೋಡಿದರು.

ದೇವಾಃ ಸರ್ವೇ ಮಹಾರಾಜ ಬೃಹಸ್ಪತಿಪುರೋಗಮಾಃ ।
ಜ್ವಲನಂ ತೇ ಸಮಾಸಾದ್ಯ ಪ್ರೀತಾ ಭೂವನ್ ಸವಾಸವಾಃ ॥೨೨॥

ಮಹಾರಾಜನೇ! ಇಂದ್ರಾದಿದೇವತೆಗಳು ಬೃಹಸ್ಪತಿಯನ್ನು ಮುಂದಿಟ್ಟುಕೊಂಡು ಅಗ್ನಿಯನ್ನು ಹೊಂದಿ ಸಂತುಷ್ಟರಾದರು.

ಪುನರ್ಯಥಾಗತಂ ಜಗ್ಮುಃ ಸರ್ವಭಕ್ಷಶ್ಚ ಸೋಽಭವತ್ ॥೨೩॥

ಭೃಗೋಃ ಶಾಪಾನ್ಮಹೀಪಾಲ ಯದುಕ್ತಂ ಬ್ರಹ್ಮವಾದಿನಾ ।
ತತ್ರೈವಾಪ್ಲುತ್ಯ ಮತಿಮಾನ್ ಬ್ರಹ್ಮಯೋನಿಂ ಜಗಾಮ ಹ ॥೨೪॥

ಅವರೆಲ್ಲಾ ಪುನಃ ತಮ್ಮ ಸ್ಥಾನಕ್ಕೆ ಹೋದರು. ಅಗ್ನಿಯಾದರೂ ಭೃಗುವಿನ ಶಾಪದಿಂದಾಗಿ ಸರ್ವಭಕ್ಷಕ (ಎಲ್ಲವನ್ನೂ ತಿನ್ನುವವನು) ಆದನು. ರಾಜನೇ! ಬ್ರಹ್ಮಜ್ಞಾನಿಯಾದ ಮುನಿಯು ಏನು ಹೇಳಿದನೋ ಹಾಗೆಯೇ ಆಯಿತು.

ಸಸರ್ಜ ಭಗವಾನ್ ಯತ್ರ ಸರ್ವಲೋಕಪಿತಾಮಹಃ ॥೨೫॥

ಬುದ್ಧಿವಂತನಾದ ಬಲರಾಮನು ಅಲ್ಲಿ ಅವಗಾಹಸ್ನಾನವನ್ನು ಮಾಡಿ ಬ್ರಹ್ಮಯೋನಿತೀರ್ಥಕ್ಕೆ ಹೋದನು. ಆ ಬ್ರಹ್ಮಯೋನಿತೀರ್ಥದಲ್ಲಿ ಸರ್ವಲೋಕ ಪಿತಾಮಹನಾದ ಚತುರ್ಮುಖಬ್ರಹ್ಮನು ಜಗತ್ತಿನ ಸೃಷ್ಟಿಯನ್ನು ಮಾಡಿದನು.

ತತ್ರಾಪ್ಲುತ್ಯ ತತೋ ಬ್ರಹ್ಮಾ ಸಹ ದೇವೈಃ ಪುರಾ ಪ್ರಭುಃ ।
ಸಸರ್ಜ ಚಾನ್ನಾನಿ ತಥಾ ದೇವತಾನಾಂ ಯಥಾವಿಧಿ ॥೨೬॥

ಹಿಂದೆ ಅಲ್ಲಿ ಚತುರ್ಮುಖನು ದೇವತೆಗಳೊಡನೆ ಸ್ನಾನವನ್ನು ಮಾಡಿ ದೇವತೆಗಳಿಗೆ ಯೋಗ್ಯವಾದ ಅನ್ನಗಳನ್ನು ಸೃಷ್ಟಿಸಿದನು.

ತತ್ರ ಸ್ನಾತ್ವಾ ಚ ದತ್ತ್ವಾ ಚ ವಸೂನಿ ವಿವಿಧಾನಿ ಚ ।
ಕೌಬೇರಂ ಪ್ರಯಯೌ ತೀರ್ಥಂ ಯತ್ರ ತಪ್ತ್ವಾ ತಪೋ ಮಹತ್ ॥೨೭॥

ಧನಾಧಿಪತ್ಯಂ ಸಂಪ್ರಾಪ್ತೋ ರಾಜನ್ನೈಲಬಿಲಃ ಪ್ರಭುಃ ॥೨೮॥

ಬಲರಾಮನು ಅಲ್ಲಿ ಸ್ನಾನವನ್ನು ಮಾಡಿ, ವಿವಿಧ ಸಂಪತ್ತುಗಳನ್ನು ದಾನಮಾಡಿ ಕೌಬೇರತೀರ್ಥಕ್ಕೆ ಹೋದನು. ರಾಜನೇ! ಈ ಕೌಬೇರತೀರ್ಥದಲ್ಲಿ ಸಮರ್ಥನಾದ ಐಲಬಿಲ (ಕುಬೇರ)ನು ಬಹಳ ತಪಸ್ಸನ್ನು ಮಾಡಿ ಧನಾಧಿಪತ್ಯವನ್ನು ಪಡೆದನು.

ತತ್ರಸ್ಥಮೇವ ತಂ ರಾಜನ್ ಧನಾನಾಂ ನಿಧಯಸ್ತಥಾ ।
ಉಪತಸ್ಥುರ್ನರಶ್ರೇಷ್ಠ ತತ್ತೀರ್ಥಂ ಲಾಂಗಲೀ ತದಾ ॥೨೯॥

ಗತ್ವಾ ಸ್ನಾತ್ವಾ ಚ ವಿಧಿವದ್ ಬ್ರಾಹ್ಮಣಾನಾಂ ದದೌ ಧನಮ್ ॥೩೦॥

ರಾಜನೇ! ಅಲ್ಲಿದ್ದ ಕುಬೇರನ ಬಳಿಗೆ ಎಲ್ಲಾ ಸಂಪತ್ತಿನ ನಿಧಿಗಳು ಬಂದು ಸೇರಿದವು. ನರೋತ್ತಮನೇ! ಬಲರಾಮನು ಆ ತೀರ್ಥಕ್ಕೆ ಹೋಗಿ, ಸ್ನಾನವನ್ನು ಮಾಡಿ ವಿಧ್ಯುಕ್ತರೀತಿಯಲ್ಲಿ ಬ್ರಾಹ್ಮಣರಿಗೆ ಸಂಪತ್ತನ್ನು ದಾನಮಾಡಿದನು.

ದದೃಶೇ ತತ್ರ ತತ್ಸ್ಥಾನಂ ಕೌಬೇರೇ ಕಾನನೇ ಪ್ರಭುಃ ॥೩೦॥

ಪುರಾ ಯತ್ರ ತಪಸ್ತಪ್ತಂ ವಿಪುಲಂ ಸುಮಹಾತ್ಮನಾ ।
ಯತ್ರ ರಾಜ್ಞಾ ಕುಬೇರೇಣ ವರಾ ಲಬ್ಧಾಶ್ಚ ಪುಷ್ಕಲಾಃ ॥೩೨॥

ಅಲ್ಲಿ ಕುಬೇರನ ವನದಲ್ಲಿ ಬಲರಾಮನು ಕುಬೇರನ ತಪಸ್ಸಿನ ಸ್ಥಳವನ್ನು ಕಂಡನು. ಯಾವ ಸ್ಥಳದಲ್ಲಿ ಕುಬೇರನಿಗೆ ಯಥೇಷ್ಟವಾದ ವರಗಳು ಲಭಿಸಿದವೋ ಆ ಸ್ಥಳವನ್ನು ನೋಡಿದನು.

ಧನಾಧಿಪತ್ಯಂ ಸಖ್ಯಂ ಚ ರುದ್ರೇಣಾಮಿತತೇಜಸಾ ।
ಸುರತ್ವಂ ಲೋಕಪಾಲತ್ವಂ ಪುತ್ರಂ ಚ ನಲಕೂಬರಮ್ ॥೩೩॥

ಯತ್ರ ಲೇಭೇ ಮಹಾಬಾಹೋ ಧನಾಧಿಪತಿರಂಜಸಾ ।
ಅಭಿಷಿಕ್ತಶ್ಚ ಯತ್ರೈವ ಸಮಾಗಮ್ಯ ಮರುದ್ಗಣೈಃ ॥೩೪॥

ವಾಹನಂ ಚಾಸ್ಯ ತದ್ದತ್ತಂ ಹಂಸಯುಕ್ತಂ ಮನೋಜವಮ್ ।
ವಿಮಾನಂ ಪುಷ್ಪಕಂ ದಿವ್ಯಂ ನೈರ್ಋತೈಶ್ವರ್ಯಮೇವ ಚ ॥೩೫॥

ಮಹಾಬಾಹೋ! ಕುಬೇರನು ಆ ಸ್ಥಳದಲ್ಲಿಯೇ ಧನಾಧಿಪತ್ಯವನ್ನೂ, ಅಮಿತತೇಜೋವಂತನಾದ ರುದ್ರನ ಜೊತೆಗೆ ಸ್ನೇಹವನ್ನೂ, ದೇವತಾತ್ವವನ್ನೂ, ಲೋಕಾಧಿಪತ್ಯವನ್ನೂ ಮತ್ತು ನಲಕೂಬರ ಎಂಬ ಮಗನನ್ನೂ ಪಡೆದನು. ಮರುದ್ಗಣಗಳೂ ಅಲ್ಲಿಯೇ ಬಂದು ಕುಬೇರನಿಗೆ ಪಟ್ಟಾಭಿಷೇಕವನ್ನು ಮಾಡಿದ್ದು. ಕುಬೇರನಿಗೆ ಆ ಮರುತ್ತುಗಳು ಹಂಸಯುಕ್ತವಾದ, ಮನೋವೇಗವುಳ್ಳ, ದಿವ್ಯವಾದ ಪುಷ್ಪಕವಿಮಾನವನ್ನು ಕೊಟ್ಟರು. ಜೊತೆಗೆ ಕುಬೇರರನ್ನು ಯಕ್ಷರ ರಾಜನನ್ನಾಗಿ ಮಾಡಿದರು.

ತತ್ರಾಪ್ಲುತ್ಯ ಮಹಾರಾಜ ದತ್ತ್ವಾ ದೇಯಾನ್ ಸುಪುಷ್ಕಲಾನ್ ।
ಜಗಾಮ ತ್ವರಿತೋ ರಾಮಸ್ತೀರ್ಥಂ ಶ್ವೇತಾನುಲೇಪನಃ ॥೩೬॥

ನಿಷೇವಿತಂ ಮಹಾಸತ್ತ್ವೈರ್ನಾಮ್ನಾ ಬದರಪಾಚನಮ್ ॥೩೭॥

ರಾಜನೇ! ಶ್ವೇತಬಣ್ಣದ ಅನುಲೇಪನವುಳ್ಳ ಬಲರಾಮನು ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ, ವಿಧ್ಯುಕ್ತವಾಗಿ ಬಹಳವಾದ ದಾನವನ್ನು ಮಾಡಿ, ಅಲ್ಲಿಂದ ಕೂಡಲೇ ಬದರಪಾಚನತೀರ್ಥಕ್ಕೆ ಹೋದನು. ಆ ಬದರಪಾಚನ ತೀರ್ಥವನ್ನು ಅನೇಕ ಪ್ರಾಣಿಗಳು ಆಶ್ರಯಿಸಿದ್ದವು.

ತಪಸ್ವಿಸಿದ್ಧಚರಿತಂ ಯತ್ರ ಕನ್ಯಾ ಧೃತವ್ರತಾ ॥೩೮॥

ಭರದ್ವಾಜಸ್ಯ ದುಹಿತಾ ರೂಪೇಣಾಪ್ರತಿಮಾ ಭುವಿ ।
ಶ್ರುತಾವತೀ ನಾಮ ವಿಭೋ ಕೌಮಾರಬ್ರಹ್ಮಚಾರಿಣೀ ॥೩೯॥

ತಪಶ್ಚಚಾರ ಸಾತ್ಯುಗ್ರಂ ನಿಯಮೈರ್ಬಹುಭಿಃ ಪ್ರಭೋ ।
ಭರ್ತಾ ಮೇ ದೇವರಾಜಃ ಸ್ಯಾದಿತಿ ನಿಶ್ಚಿತ್ಯ ಭಾಮಿನೀ ॥೪೦॥

ವಿಭುವೇ! ಪ್ರಭುವೇ! ತಪಸ್ವಿಗಳು ಮತ್ತು ಸಿದ್ಧಪುರುಷರು ಅಲ್ಲಿ ಸಂಚಾರಮಾಡುತ್ತಿದ್ದರು. ಅಲ್ಲಿಯೇ ಭರದ್ವಾಜನ ಮಗಳಾದ ಲೋಕಸುಂದರಿಯಾದ ಶ್ರುತಾವತಿಯು ಕುಮಾರಿಯಾಗಿರುವಾಗಲೇ ಬ್ರಹ್ಮಚಾರಿಣಿಯಾಗಿ ವ್ರತವನ್ನು ಕೈಗೊಂಡು ವ್ರತವನ್ನು ಆಚರಿಸಿದ್ದಳು. ಆ ಭಾಮಿನಿಯು, ತನಗೆ ದೇವರಾಜನಾದ ಇಂದ್ರನು ಪತಿಯಾಗಬೇಕೆಂದು ನಿಶ್ಚಯಿಸಿಕೊಂಡು ಅನೇಕ ನಿಯಮಗಳಿಂದ ತಪಸ್ಸನ್ನು ಆಚರಿಸಿದಳು.

ಸಮಾಸ್ತಸ್ಯಾ ವ್ಯತಿಕ್ರಾಂತಾ ಬಹ್ವ್ಯಃ ಕುರುಕುಲೋದ್ವಹ ।
ಚರಂತ್ಯಾ ನಿಯಮಾಂಸ್ತಾಂಸ್ತಾನ್ ಸ್ತ್ರೀಭಿಸ್ತೀವ್ರಾನ್ ಸುದುಶ್ಚರಾನ್ ॥೪೧॥

ಕುರುಕುಲಸಂಭೂತನೇ! ಸ್ತ್ರೀಯರಿಗೆ ಮಾಡಲು ಕಷ್ಟಸಾಧ್ಯವಾದ ಆ ನಿಯಮಗಳನ್ನು ಆಚರಿಸುತ್ತಾ ತಪಸ್ಸನ್ನು ಮಾಡುತ್ತಿರುವಾಗ ಅನೇಕ ವರ್ಷಗಳು ಕಳೆದವು.

ತಸ್ಯಾಸ್ತು ತೇನ ವೃತ್ತೇನ ತಪಸಾ ಚ ವಿಶಾಂಪತೇ ।
ಭಕ್ತ್ಯಾ ಪರಮಯಾ ಪ್ರೀತೋ ಭಗವಾನ್ ಪಾಕಶಾಸನಃ ॥೪೨॥

ಆಜಗಾಮಾಶ್ರಮಂ ತಸ್ಯಾಃ ತ್ರಿದಶಾಧಿಪತಿಸ್ತದಾ ।
ಆಸ್ಥಾಯ ರೂಪಂ ಬ್ರಹ್ಮರ್ಷೇರ್ವಸಿಷ್ಠಸ್ಯ ಮಹಾತ್ಮನಃ ॥೪೩॥

ರಾಜನೇ! ಅವಳ ಆ ಆಚರಣೆ, ತಪಸ್ಸು ಮತ್ತು ಉತ್ತಮವಾದ ಭಕ್ತಿಯಿಂದ ಪ್ರೀತನಾದ, ದೇವತೆಗಳ ಅಧಿಪತಿಯಾದ ಭಗವಾನ್ ಇಂದ್ರನು ಮಾಹಾತ್ಮನಾದ ಬ್ರಹ್ಮರ್ಷಿ ವಸಿಷ್ಠನ ರೂಪವನ್ನು ಧಾರಣೆ ಮಾಡಿಕೊಂಡು ಆ ಶ್ರುತಾವತಿಯ ಆಶ್ರಮಕ್ಕೆ ಬಂದನು.

ಸಾ ತಂ ದೃಷ್ಟ್ವೋಗ್ರತಪಸಂ ವಸಿಷ್ಠಂ ಜಪತಾಂ ವರಮ್ ।
ಆಚಾರ್ಯೈರ್ಬಹುಭಿರ್ಜುಷ್ಟಂ ಪೂಜಯಾಮಾಸ ಭಾರತ ॥೪೪॥

ಭರತಕುಲೋದ್ಭವನೇ! ಬಂದಿರುವ ಉತ್ತಮಜಪಾನುಷ್ಠಾನವುಳ್ಳ, ಕಠಿಣವಾದ ತಪಸ್ಸುಳ್ಳ ವಸಿಷ್ಠರನ್ನು ನೋಡಿ, ಆ ಶ್ರುತಾವತಿಯು ಅನೇಕ ಉಪಚಾರಗಳಿಂದ ಪೂಜಿಸಿದಳು.

ಉವಾಚ ವಿನಯಜ್ಞಾ ಸಾ ಕಲ್ಯಾಣೀ ಚ ಪ್ರಿಯಂವದಾ ॥೪೫॥

ನಯ-ವಿನಯವನ್ನು ತಿಳಿದ ಮಂಗಳಸ್ವರೂಪಿಯಾದ ಆಕೆಯು ಮಧುರವಾಗಿ ಮಾತನಾಡುತ್ತಾ ಹೇಳಿದಳು.

ಶ್ರುತಾವತೀ

ವದಸ್ವ ಮುನಿಶಾರ್ದೂಲ ಕಿಮಾಜ್ಞಾಪಯಸಿ ಪ್ರಭೋ ।
ಸರ್ವಮದ್ಯ ಯಥಾಶಕ್ತಿ ತವ ದಾಸ್ಯಾಮಿ ಸುವ್ರತಾ ॥೪೬॥

ಶಕ್ರಭಕ್ತ್ಯಾ ಚ ತೇ ಪಾಣಿಂ ನ ದಾಸ್ಯಾಮಿ ಕಥಂಚನ ॥೪೭॥

ವ್ರತೈಶ್ಚ ನಿಯಮೈಶ್ಚೈವ ತಪಸಾ ಚ ತಪೋಧನ ।
ಶಕ್ರಸ್ತೋಷಯಿತವ್ಯೋ ವೈ ಮಯಾ ತ್ರಿಭುವನೇಶ್ವರಃ ॥೪೮॥

ಶ್ರುತಾವತೀ– ಪ್ರಭುವೇ! ಮುನಿಗಳಲ್ಲಿಯೇ ಶ್ರೇಷ್ಠನಾದವನೇ! ನನಗೆ ಏನನ್ನು ಆಜ್ಞಾಪಿಸುತ್ತಿ? ಹೇಳು! ಒಳ್ಳೆಯ ವ್ರತವನ್ನು ಆಚರಿಸುವವನೇ! ಎಲ್ಲವನ್ನೂ ನನ್ನ ಶಕ್ತಿಗನುಸಾರವಾಗಿ ಇಂದು ಕೊಡುತ್ತೇನೆ. ಆದರೆ ನಿನ್ನನ್ನು ವಿವಾಹವಾಗಲಾರೆ. ಏಕೆಂದರೆ ನಾನು ಇಂದ್ರನ ಭಕ್ತಳಾಗಿದ್ದೇನೆ. ತಪೋಧನನೇ! ವ್ರತ-ನಿಯಮಗಳಿಂದ ಹಾಗೂ ತಪಸ್ಸಿನಿಂದ ನಾನು ತ್ರಿಲೋಕಾಧಿಪತಿಯಾದ ಇಂದ್ರನನ್ನೇ ಆರಾಧಿಸಬೇಕು.

ವೈಶಂಪಾಯನಃ

ಇತ್ಯುಕ್ತೋ ಭಗವಾನ್ ದೇವಃ ಸ್ಮಯನ್ನಿವ ನಿರೀಕ್ಷ್ಯ ತಾಮ್ ।
ಉವಾಚ ನಿಯಮಂ ಜ್ಞಾತ್ವಾ ಸಾಂತ್ವಯನ್ನಿವ ಭಾರತ ॥೪೯॥

ವೈಶಂಪಾಯನ– ಭರತಕುಲೋದ್ಭವನೇ! ಅವಳ ಮಾತನ್ನು ಕೇಳಿದ ಇಂದ್ರದೇವನು ಮುಗುಳ್ನಗುತ್ತಾ, ಅವಳನ್ನು ನೋಡಿ, ಅವಳ ನಿಯಮಗಳನ್ನೂ ತಿಳಿದುಕೊಂಡು ಅವಳನ್ನು ಸಮಾಧಾನಪಡಿಸುತ್ತಾ ಹೀಗೆ ಹೇಳುತ್ತಾನೆ.

ಇಂದ್ರಃ

ಉಗ್ರಂ ತಪಶ್ಚರಸಿ ಹಿ ವಿದಿತಾ ಮೇಽಸಿ ಸುವ್ರತೇ ।
ಯದರ್ಥಮಯಮಾರಂಭಸ್ತವ ಕಲ್ಯಾಣಿ ಹೃದ್ಗತಃ ॥೫೦॥

ತತ್ಸರ್ವಂ ಚ ತಥಾಭೂತಂ ಭವಿಷ್ಯತಿ ವರಾನನೇ ।
ತಪಸಾ ಲಭ್ಯತೇ ಸರ್ವಂ ಸರ್ವಂ ತಪಸಿ ತಿಷ್ಠತಿ ॥೫೧॥

ಇಂದ್ರ– ಉತ್ತಮವಾದ ವ್ರತವನ್ನು ಆಚರಿಸುವವಳೇ! ಉಗ್ರವಾದ ತಪಸ್ಸನ್ನು ಆಚರಿಸಿರುವೆ. ಇದು ನನಗೆ ಗೊತ್ತು. ಮಂಗಳಸ್ವರೂಪಳೇ! ಯಾವ ಪ್ರಯೋಜನಕ್ಕಾಗಿ ಈ ತಪಸ್ಸು-ನಿಯಮಾನುಷ್ಠಾನವನ್ನು ಆರಂಭಿಸಿಕೊಂಡಿರುವಿಯೋ ಅದೆಲ್ಲವೂ ಹಾಗೆಯೇ ಆಗುವುದು. ತಪಸ್ಸಿನಿಂದ ಎಲ್ಲವೂ ಸಿಗುತ್ತದೆ. ತಪಸ್ಸಿನಲ್ಲಿ ಎಲ್ಲವೂ ಇದೆ.

ಯಾನಿ ಸ್ಥಾನಾನಿ ಸರ್ವಾಣಿ ವಿಬುಧಾನಾಂ ಶುಭಾನನೇ ।
ತಪಸಾ ತಾನಿ ಲಭ್ಯಂತೇ ತಪೋಮೂಲಂ ಮಹತ್ಸುಖಮ್ ॥೫೨॥

ಶುಭಾನನೆಯೇ! ದೇವತೆಗಳ ಸ್ಥಾನಗಳೆಲ್ಲವೂ ತಪಸ್ಸಿನಿಂದಲೇ ಪ್ರಾಪ್ತವಾದವುಗಳು. ಎಲ್ಲಾ ಸುಖಗಳಿಗೂ ತಪಸ್ಸೇ ಕಾರಣ.

ಇತಿ ಕೃತ್ವಾ ತಪೋ ಘೋರಂ ದೇಹಂ ಸಂತ್ಯಜ್ಯ ಮಾನವಾಃ ।
ದೇವತ್ವಂ ಯಾಂತಿ ಕಲ್ಯಾಣಿ ಶೃಣು ಚೇದಂ ವಚೋ ಮಮ ॥೫೩॥

ಮಾನವರು ಇಂತಹ ತಪಸ್ಸನ್ನು ಮಾಡಿ, ದೇಹವನ್ನು ಬಿಟ್ಟು ದೇವತ್ವವನ್ನು ಹೊಂದುತ್ತಾರೆ. ಕಲ್ಯಾಣಿಯೇ! ನನ್ನ ಈ ಮಾತನ್ನು ಕೇಳು.

ಪಚಸ್ವೈತಾನಿ ಸುಭಗೇ ಬದರಾಣಿ ಶುಭವ್ರತೇ ॥೫೪॥

ಶುಭವ್ರತಳೇ! ಶುಭವಾದ ಭಾಗ್ಯವುಳ್ಳವಳೇ! ಈ ಬದರದ ಹಣ್ಣುಗಳನ್ನು ಬೇಯಿಸು.

**ವೈಶಂಪಾಯನಃ**

**ಪಚೇತ್ಯುಕ್ತ್ವಾ ಸ ಭಗವಾನ್ ಜಗಾಮ ಬಲಸೂದನಃ ॥೫೫॥**

**ಆಮಂತ್ರ್ಯ ತಾಂ ತು ಕಲ್ಯಾಣೀಂ ತತೋ ಜಪ್ಯಂ ಜಜಾಪ ಸಾ ।**
**ಅವಿದೂರೇ ತತಸ್ತಸ್ಮಾದ್ ಆಶ್ರಮಾತ್ ತೀರ್ಥ ಉತ್ತಮೇ ॥೫೬॥**

ವೈಶಂಪಾಯನ– ಬೇಯಿಸು ಎಂದು ಹೇಳಿ ಭಗವಾನ್ ಇಂದ್ರನು ಕಲ್ಯಾಣಿಯಾದ ಅವಳ ಒಪ್ಪಿಗೆಯನ್ನು ಪಡೆದುಕೊಂಡು ಹೋದನು. ಅನಂತರ ಅವಳು ಅಲ್ಲಿಂದ ಸಮೀಪದಲ್ಲಿಯೇ ಇದ್ದ ಉತ್ತಮ ತೀರ್ಥಕ್ಷೇತ್ರದಲ್ಲಿ ಜಪಿಸಬೇಕಾದ ಮಂತ್ರಗಳನ್ನು ಜಪಿಸಿದಳು.

**ತಚ್ಚ ತೀರ್ಥಂ ಮಹಾರಾಜ ಯತ್ರ ಜಪ್ಯಂ ಜಜಾಪ ಸಾ ।**
**ಇಂದ್ರತೀರ್ಥಂ ಮಹಾರಾಜ ತ್ರಿಷು ಲೋಕೇಷು ವಿಶ್ರುತಮ್ ॥೫೭॥**

ಮಹಾರಾಜನೇ! ಯಾವ ತೀರ್ಥದಲ್ಲಿ ಶ್ರುತಾವತಿಯು ಜಪವನ್ನು ಜಪಿಸಿದಳೋ ಅದು ಇಂದ್ರತೀರ್ಥವೆಂದು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾಯಿತು.

**ತಸ್ಯಾ ಜಿಜ್ಞಾಸನಾರ್ಥೇ ತು ಭಗವಾನ್ ಪಾಕಶಾಸನಃ ।**
**ಬದರಾಣಾಮಪಚನಂ ಚಕಾರ ವಿಬುಧಾಧಿಪಃ ॥೫೮॥**

ದೇವತೆಗಳಿಗೆ ಒಡೆಯನಾದ ಭಗವಾನ್ ಇಂದ್ರನು ಅವಳ ಮನಸ್ಸಿನ ಭಾವವನ್ನು ತಿಳಿಯಲಿಕ್ಕಾಗಿ ಬದರಹಣ್ಣುಗಳು ಬೇಯದಂತೆ ಮಾಡಿದನು.

**ತತಃ ಸಾ ಪ್ರಯತಾ ರಾಜನ್ ವಾಗ್ಯತಾ ವಿಗತಕ್ಲಮಾ ।**
**ತತ್ಪರಾ ಶುಚಿಸಂವೀತಾ ಪಾವಕೇ ಸಮಧಿಶ್ರಯತ್ ॥೫೯॥**

ರಾಜನೇ! ಅನಂತರ ಅವಳು ವಾಂಗ್ನಿಯಮಕ್ಕೊಳಗಾಗಿ, ಉದ್ವೇಗಕ್ಕೊಳಗಾಗದೆ ಪ್ರಯತ್ನಪೂರ್ವಕವಾಗಿ ಬದರಫಲಗಳನ್ನು ಬೆಂಕಿಯಲ್ಲಿ ಬೇಯಲು ಇಟ್ಟಳು.

**ಅಪಚತ್ ಪುರುಷವ್ಯಾಘ್ರ ಬದರಾಣಿ ಶುಭವ್ರತಾ ॥೬೦॥**

ಪುರುಷಶ್ರೇಷ್ಠನೇ! ಮಂಗಳಕರವಾದ ವ್ರತವನ್ನು ಆಚರಿಸುತ್ತಿದ್ದ ಆಕೆ ಬದರಫಲಗಳನ್ನು ಬೇಯಿಸಿದಳು.

**ತಸ್ಯಾಃ ಪಚಂತ್ಯಾಃ ಸುಚಿರಂ ಕಾಲೋಽಗಾತ್ ಪುರುಷರ್ಷಭ ।**
**ನ ಚ ಸ್ಮ ತಾನಿ ಪಚ್ಯಂತೇ ದಿನಂ ಚ ಕ್ಷಯಮಭ್ಯಯಾತ್ ॥೬೧॥**

ಪುರುಷವೃಷಭನೇ! ಹೀಗೆ ಅವಳು ಬೇಯಿಸುತ್ತಿದ್ದಾಗ ಬಹಳ ಸಮಯವು ಕಳೆದುಹೋಯಿತು. ಆದರೆ ಫಲಗಳು ಬೇಯಲಿಲ್ಲ. ದಿನಗಳು ಕಳೆದುಹೋಗುತ್ತಿದ್ದವು.

**ಹುತಾಶನೇನ ದಗ್ಧಶ್ಚ ಯಸ್ತಸ್ಯಾಃ ಕಾಷ್ಠಸಂಚಯಃ ।**
**ಅಕಾಷ್ಠಮಗ್ನಿಂ ಸಾ ದೃಷ್ಟ್ವಾ ಸ್ವಶರೀರಮಥಾಪಚತ್ ॥೬೨॥**

ಅವಳು ಸಂಗ್ರಹಿಸಿದ್ದ ಕಟ್ಟಿಗೆಯ ರಾಶಿಯು ಉರಿದು ಮುಗಿಯಿತು. ಕಟ್ಟಿಗೆ ಇಲ್ಲದ್ದನ್ನು ನೋಡಿ ಅವಳು ತನ್ನ ಶರೀರವನ್ನೇ ಕಟ್ಟಿಗೆಯನ್ನಾಗಿ ಉಪಯೋಗಿಸಿದಳು.

**ಪಾದೌ ಪ್ರಕ್ಷಿಪ್ಯ ಸಾ ಪೂರ್ವಂ ಪಾವಕೇ ಚಾರುದರ್ಶನಾ ।**
**ದಗ್ಧೌ ದಗ್ಧೌ ಪುನಃ ಪಾದಾವುಪಾವರ್ತಯತಾನಘ ॥೬೩॥**

ಸುಂದರಿಯಾದ ಆಕೆಯು ಮೊದಲಿಗೆ ತನ್ನ ಕಾಲಿನ ಪಾದಗಳನ್ನೇ ಬೆಂಕಿಯಲ್ಲಿ ಇರಿಸಿದಳು. ದೋಷರಹಿತನೇ! ಪಾದಗಳು ಉರಿಯುತ್ತಿದ್ದಂತೆಯೇ ಮತ್ತೆ ಅವುಗಳು ಬೆಳೆಯತೊಡಗಿದವು.

**ಚರಣೌ ದಹ್ಯಮಾನೌ ಚ ನಾಚಿಂತಯದನಿಂದಿತಾ ।**
**ದುಃಖಂ ಕಮಲಪತ್ರಾಕ್ಷೀ ಮಹರ್ಷೇಃ ಪ್ರಿಯಕಾಮ್ಯಯಾ ॥೬೪॥**

ಕಮಲದ ಕಣ್ಣುಗಳುಳ್ಳ, ಪರಿಶುದ್ಧಳಾದ ಅವಳು ತನ್ನ ಕಾಲುಗಳು ಸುಡುತ್ತಿದ್ದರೂ ಮಹರ್ಷಿಯ ಅನುಗ್ರಹವನ್ನು ಅಪೇಕ್ಷಿಸುವವಳಾಗಿ ತನಗೆ ಆಗುತ್ತಿರುವ ದುಃಖದ ಬಗ್ಗೆ ಚಿಂತಿಸುತ್ತಿರಲಿಲ್ಲ.

**ನ ವೈಮನಸ್ಯಂ ತಸ್ಯಾಸ್ತು ಮುಖಭೇದೋಽಥವಾಽಭವತ್ ।**
**ಶರೀರಮಗ್ನಿನಾ ದೀಪ್ಯ ಜಲಮಧ್ಯೇ ಯಥಾ ಸ್ಥಿತಾ ॥೬೫॥**

ಅವಳ ಮನಸ್ಸಿನಲ್ಲಿ ಯಾವುದೇ ವಿಕಾರವುಂಟಾಗಲಿಲ್ಲ. ಮುಖದಲ್ಲಿ ಯಾವುದೇ ವ್ಯತ್ಯಾಸವು ಕಾಣಿಸಲಿಲ್ಲ. ಅವಳ ಶರೀರವು ಅಗ್ನಿಯ ಮಧ್ಯದಲ್ಲಿ ಸುಡುತ್ತಿದ್ದರೂ ಅವಳು ನೀರಿನ ಮಧ್ಯದಲ್ಲಿ ಇದ್ದ ಹಾಗೆ ಇದ್ದಳು.

ತಚ್ಚಾಸ್ಯಾ ವಚನಂ ನಿತ್ಯಮಾವರ್ತದ್ ಹೃದಿ ಭಾರತ ।
ಸರ್ವಥಾ ಬದರಾಣ್ಯೇವ ಪಕ್ತವ್ಯಾನೀತಿ ಕನ್ಯಕಾ ॥೬೬॥

ಭರತಕುಲೋದ್ಭವನೇ! ಋಷಿರೂಪದಲ್ಲಿದ್ದ ಇಂದ್ರನು ಹೇಳಿದ್ದ ''ಹೇಗಾದರೂ ಬದರಫಲಗಳನ್ನು ಬೇಯಿಸು'' ಎಂಬ ಮಾತು ಅವಳ ಹೃದಯದಲ್ಲಿ ಯಾವಾಗಲೂ ಸುತ್ತುತ್ತಿತ್ತು.

ಸಾ ತದ್ ಹೃದಿ ದೃಢಂ ಕೃತ್ವಾ ಮಹರ್ಷೇರ್ವಚನಂ ಶುಭಾ ।
ಅಪಚದ್ ಬದರಾಣ್ಯೇವ ನ ಚಾಪಚ್ಯಂತ ಭಾರತ ॥೬೭॥

ಮಂಗಳಮಯಳಾದ ಆಕೆಯು ಋಷಿಯ ಮಾತನ್ನು ಹೃದಯದಲ್ಲಿ ದೃಢಗೊಳಿಸಿ ಬದರಗಳನ್ನು ಬೇಯಿಸಿದಳು. ಭಾರತನೇ! ಬದರಗಳು ಬೇಯಲಿಲ್ಲ.

ತಸ್ಯಾಶ್ಚ ಚರಣೌ ವಹ್ನಿರ್ದದಾಹ ಭಗವಾನ್ ಭೃಶಮ್ ।
ನ ಚ ತಸ್ಯಾ ಮನೋದುಃಖಂ ಸ್ವಲ್ಪಮಪ್ಯಭವತ್ ತದಾ ॥೬೮॥

ಭಗವಾನ್ ಅಗ್ನಿದೇವನು ಅವಳ ಕಾಲುಗಳನ್ನು ಸುಟ್ಟುಹಾಕಿದನು. ಆದರೆ ಆಗ ಅವಳಿಗೆ ಸ್ವಲ್ಪವೂ ಮನಸ್ಸಿಗೆ ಖೇದವು ಉಂಟಾಗಲಿಲ್ಲ.

ಅಥ ತತ್ ಕರ್ಮ ದೃಷ್ಟ್ವಾಸ್ಯಾಃ ಪ್ರೀತಸ್ತ್ರಿಭುವನೇಶ್ವರಃ ।
ತತಃ ಸ ದರ್ಶಯಾಮಾಸ ಕನ್ಯಾಯೈ ರೂಪಮಾತ್ಮನಃ ॥೬೯॥

ಹೀಗೆ ನಡೆದ ನಂತರ ಮೂರುಲೋಕಗಳ ಅಧಿಪತಿಯಾದ ದೇವೇಂದ್ರನು ಅವಳ ಈ ಕಾರ್ಯವನ್ನು ನೋಡಿ ಅವಳ ಬಗ್ಗೆ ಸಂತುಷ್ಟನಾದನು. ಕನ್ಯೆಗೆ ತನ್ನ ನಿಜವಾದ ರೂಪವನ್ನು ತೋರಿಸಿದನು.

ಉವಾಚ ಚ ಸುರಶ್ರೇಷ್ಠಃ ತಾಂ ಕನ್ಯಾಂ ಸುದೃಢವ್ರತಾಮ್ ॥೭೦॥

ಬಹಳ ದೃಢವಾದ ವ್ರತವನ್ನು ಆಚರಿಸುತ್ತಿದ್ದ ಆ ಕನ್ಯೆಗೆ ಇಂದ್ರನು ಹೀಗೆ ಹೇಳಿದನು.

ಇಂದ್ರಃ

ಪ್ರೀತೋಽಸ್ಮಿ ತೇ ಶುಭೇ ಭಕ್ತ್ಯಾ ತಪಸಾ ವಿಪುಲೇನ ಚ ।
ತಸ್ಮಾದ್ ಯೋಽಭಿಮತಃ ಕಾಮಃ ಸ ತೇ ಸಂಪತ್ಸ್ಯತೇ ಶುಭೇ ॥೭೧॥

ಇಂದ್ರ– ಮಂಗಳೆಯೇ! ನಿನ್ನ ಬಹಳವಾದ ಭಕ್ತಿಯಿಂದ, ಬಹಳವಾದ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ಶುಭಳೇ! ನಿನ್ನ ಯಾವ ಕಾಮನೆಯು ಇದೆಯೋ ಅದು ನಿನಗೆ ಲಭಿಸುವುದು.

**ದೇಹಂ ತ್ಯಕ್ತ್ವಾ ಮಹಾಭಾಗೇ ತ್ರಿದಿವೇ ಚ ನಿವತ್ಸ್ಯಸಿ ॥೭೨॥**

ಈ ದೇಹವನ್ನು ಬಿಟ್ಟ ಮೇಲೆ ಸ್ವರ್ಗದಲ್ಲಿ ವಾಸ ಮಾಡುವಿ.

**ಇದಂ ಚ ತೇ ತೀರ್ಥವರಂ ಖ್ಯಾತಂ ಲೋಕೇ ಭವಿಷ್ಯತಿ ।**
**ಸರ್ವಪಾಪಾಪಹಂ ಸುಭ್ರು ನಾಮ್ನಾ ಬದರಪಾಚನಮ್ ॥೭೩॥**

ಒಳ್ಳೆಯ ಕಣ್ಣಿನ ಹುಬ್ಬುಳ್ಳವಳೆ! ಈ ಉತ್ತಮವಾದ ತೀರ್ಥವು ಬದರಪಾಚನವೆಂಬ ಹೆಸರನ್ನು ಪಡೆಯುವುದು ಮತ್ತು ಸಕಲಪಾಪಪರಿಹಾರಕವೆಂದು ಲೋಕದಲ್ಲಿ ಪ್ರಸಿದ್ಧವಾಗುವುದು.

**ವಿಖ್ಯಾತಂ ತ್ರಿಷು ಲೋಕೇಷು ಬ್ರಹ್ಮರ್ಷಿಭಿರಭಿಪ್ಲುತಮ್ ॥೭೪॥**

ಬ್ರಹ್ಮಜ್ಞಾನಿಗಳು ಬಂದು ನೆಲೆಸುವ ಈ ತೀರ್ಥವು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾಗುವುದು.

**ಅಸ್ಮಿನ್ ಖಲು ಮಹಾಭಾಗೇ ಶುಭೇ ತೀರ್ಥವರೇ ಪುರಾ ।**
**ನ್ಯಸ್ಯ ಸಪ್ತರ್ಷಯೋ ಯಾತಾ ಹಿಮವಂತಮರುಂಧತೀಮ್ ॥೭೫॥**

ಮಹಾಭಾಗ್ಯವಂತಳೇ! ಮಂಗಳೆಯೇ! ಈ ಉತ್ತಮವಾದ ತೀರ್ಥದಲ್ಲಿಯೇ ಹಿಂದೆ ಸಪ್ತರ್ಷಿಗಳು ಅರುಂಧತಿಯನ್ನು ಇರಿಸಿ ತಾವು ಹಿಮಾಲಯಕ್ಕೆ ಹೋದರು.

**ತತಸ್ತೇ ಸುಮಹಾಭಾಗಾ ಗತ್ವಾ ತತ್ರ ಸುಸಂಶಿತಾಃ ।**
**ವೃತ್ತ್ಯರ್ಥಂ ಫಲಮೂಲಾನಿ ಸಮಾಹರ್ತುಂ ಯಯುಃ ಕಿಲ ॥೭೬॥**

ಅನಂತರ ಕಠಿಣವಾದ ವ್ರತವನ್ನು ಆಚರಿಸುತ್ತಿದ್ದ ಅರುಂಧತಿಯು ತನ್ನ ಜೀವನಕ್ಕಾಗಿ ಹಣ್ಣು ಮತ್ತು ಗೆಡ್ಡೆಗಳನ್ನು ಸಂಗ್ರಹಿಸಲಿಕ್ಕಾಗಿ ಹೋದಳು.

**ತೇಷಾಂ ವೃತ್ತ್ಯರ್ಥಿನಾಂ ತತ್ರ ವಸತಾಂ ಹಿಮವದ್ ವನೇ ।**
**ಅನಾವೃಷ್ಟಿರನುಪ್ರಾಪ್ತಾ ತದಾ ದ್ವಾದಶವಾರ್ಷಿಕೀ ॥೭೭॥**

ಈ ಕಡೆ ಸಪ್ತರ್ಷಿಗಳು ಹಿಮಾಲಯದಲ್ಲಿ ಜೀವನವನ್ನು ಮಾಡುತ್ತಿದ್ದಾಗ ಹನ್ನೆರಡು ವರ್ಷಗಳ ಕಾಲ ಮಳೆಯು ಬರಲಿಲ್ಲ.

ತೇಽತ್ರ ಕೃತ್ವಾಽಽಶ್ರಮಂ ರಾಜನ್ ನ್ಯವಸಂತ ತಪಸ್ವಿನಃ ।
ಅರುಂಧತ್ಯಪಿ ಕಲ್ಯಾಣೀ ತಪೋನಿತ್ಯಾಽಭವತ್ ತದಾ ॥೭೮॥

ತಪಸ್ವಿಗಳು ಅಲ್ಲಿಯೇ ಆಶ್ರಮಗಳನ್ನು ನಿರ್ಮಿಸಿಕೊಂಡು ವಾಸಿಸತೊಡಗಿದರು. ಆಗ ಮಂಗಳಮಯಳಾದ ಅರುಂಧತಿಯೂ ಕೂಡ ತಪಸ್ಸಿನಲ್ಲಿ ತೊಡಗಿದಳು.

ಅರುಂಧತೀಂ ತತೋ ದೃಷ್ಟ್ವಾ ತೀರ್ಥೇ ನಿಯಮಮಾಸ್ಥಿತಾಮ್ ।
ಅಥಾಗಮತ್ ತ್ರಿಣಯನಃ ಸಂಪ್ರೀತೋ ವರದಸ್ತದಾ ॥೭೯॥

ಬ್ರಹ್ಮರೂಪಂ ತದಾ ಕೃತ್ವಾ ಮಹಾದೇವೋ ಮಹಾಯಶಾಃ ।
ತಾಮಭ್ಯೇತ್ಯಾಬ್ರವೀದ್ ದೇವೋ ಭಿಕ್ಷಾಮಿಚ್ಛಾಮ್ಯಹಂ ಶುಭೇ ॥೮೦॥

ತೀರ್ಥದಲ್ಲಿ ನಿಯಮವನ್ನು ಪಾಲಿಸುತ್ತಿದ್ದ ಅರುಂಧತಿಯನ್ನು ನೋಡಿ ಸಂತುಷ್ಟನಾದ, ಮಹಾಯಶೋವಂತನಾದ ರುದ್ರನು ಬ್ರಾಹ್ಮಣನ ರೂಪವನ್ನು ತಾಳಿ ವರವನ್ನು ಕೊಡಲಿಕ್ಕಾಗಿ ಅಲ್ಲಿಗೆ ಬಂದನು. ಅವಳ ಹತ್ತಿರ ಬಂದು ಮಹಾದೇವ ರುದ್ರನು ''ಶುಭಳೇ! ನಾನು ಭಿಕ್ಷೆಯನ್ನು ಬಯಸುತ್ತೇನೆ'' ಎಂದು ಹೇಳಿದನು.

ಪ್ರತ್ಯುವಾಚ ತತಃ ಸಾ ತು ಬ್ರಾಹ್ಮಣಂ ಚಾರುದರ್ಶನಾ ॥೮೧॥

ಸುಂದರಿಯಾದ ಅರುಂಧತಿಯು ಆ ಬ್ರಾಹ್ಮಣನಿಗೆ ಹೀಗೆ ಉತ್ತರಿಸುತ್ತಾಳೆ.

ಅರುಂಧತೀ

ಕ್ಷೀಣೋಽನ್ನಸಂಚಯೋ ವಿಪ್ರ ಬದರಾಣೀಹ ಭಕ್ಷಯ ॥೮೨॥

ಅರುಂಧತೀ– ಬ್ರಾಹ್ಮಣನೇ! ಅನ್ನವೆಲ್ಲವೂ ಖಾಲಿಯಾಗಿದೆ. ಇಲ್ಲಿ ಬದರಫಲಗಳನ್ನು ತಿನ್ನು!

ಇಂದ್ರಃ

ತತೋಽಬ್ರವೀನ್ಮಹಾದೇವಃ ಪಚಸ್ವೈತಾನಿ ಭಾಮಿನಿ ।
ಇತ್ಯುಕ್ತಾ ಸಾಽಪಚತ್ ತಾನಿ ಬ್ರಾಹ್ಮಣಪ್ರಿಯಕಾಮ್ಯಯಾ ॥೮೩॥

ಇಂದ್ರ– ಅನಂತರ ಮಹಾದೇವ ರುದ್ರನು ಅವಳಿಗೆ ''ಸುಂದರಿಯೇ! ಈ ಬದರಫಲಗಳನ್ನು ಬೇಯಿಸು'' ಎಂದು ಹೇಳಿದನು. ಬ್ರಾಹ್ಮಣನ ಅನುಗ್ರಹವನ್ನು ಬಯಸಿದವಳಾಗಿ ಅರುಂಧತಿಯು ಬದರಫಲಗಳನ್ನು ಬೇಯಿಸಿದಳು.

**ಅಧಿಶ್ರಿತ್ಯ ಸಮಿದ್ಧೇಗ್ನೌ ಬದರಾಣಿ ಯಶಸ್ವಿನೀ ॥೮೪॥**

ಕೀರ್ತಿವಂತಳಾದ ಅರುಂಧತಿಯು ಉರಿಯುತ್ತಿದ್ದ ಬೆಂಕಿಯಲ್ಲಿ ಬದರಗಳನ್ನು ಬೇಯಿಸಿದಳು.

**ದಿವ್ಯಾ ಮನೋರಮಾಃ ಪುಣ್ಯಾಃ ಕಥಾಃ ಶುಶ್ರಾವ ಸಾ ಶುಭಾ ।**
**ಅತೀತಾ ಸಾ ತ್ವನಾವೃಷ್ಟಿರ್ಘೋರಾ ದ್ವಾದಶವಾರ್ಷಿಕೀ ॥೮೫॥**

ಮಂಗಳಮಯಳಾದ ಅರುಂಧತಿಯು ದಿವ್ಯವಾದ, ಮನೋಹಾರಿಯಾದ ಪುಣ್ಯಪ್ರದಕಥೆಗಳನ್ನು ಕೇಳಿಸಿಕೊಂಡಳು. ಭಯಂಕರವಾದ ಹನ್ನೆರಡು ವರ್ಷಗಳ ಬರಗಾಲವೂ ಕಳೆದುಹೋಯಿತು.

**ಅನಶ್ನಂತ್ಯಾಃ ಪಚಂತ್ಯಾಶ್ಚ ಶೃಣ್ವಂತ್ಯಾಶ್ಚ ಕಥಾಃ ಶುಭಾಃ ।**
**ಅಹ್ನಾ ಸಮಃ ಸ ತಸ್ಯಾಸ್ತು ಕಾಲೋಽತೀತಃ ಸುದಾರುಣಃ ॥೮೬॥**

ಊಟವನ್ನು ಬಿಟ್ಟು, ಮಂಗಳವಾದ ಕಥೆಗಳನ್ನು ಕೇಳುತ್ತಾ, ಬದರಗಳನ್ನು ಬೇಯಿಸುತ್ತಿದ್ದಾಗ ದಿನ-ವರ್ಷಲೆಕ್ಕದಲ್ಲಿ ದುಃಖದಾಯಕವಾದ ಬಹಳ ಕಾಲವು ಕಳೆದುಹೋಯಿತು.

**ತತಸ್ತೇ ಮುನಯಃ ಪ್ರಾಪ್ತಾಃ ಫಲಾನ್ಯಾದಾಯ ಪರ್ವತಾತ್ ।**
**ತತಃ ಸ ಭಗವಾನ್ ಪ್ರೀತಃ ಪ್ರೋವಾಚಾರುಂಧತೀಂ ತದಾ ॥೮೭॥**

ಅನಂತರ ಮುನಿಗಳು ಪರ್ವತದಿಂದ ಫಲಗಳನ್ನು ತೆಗೆದುಕೊಂಡು ಬಂದರು. ಭಗವಾನ್ ರುದ್ರನು ಸಂತುಷ್ಟನಾಗಿ ಅರುಂಧತಿಗೆ ಹೀಗೆ ಹೇಳುತ್ತಾನೆ.

ಮಹಾದೇವಃ

ಉಪಸರ್ಪಸ್ವ ಭದ್ರಂ ತೇ ಯಥಾಪೂರ್ವಂ ಹಿ ತಾನೃಷೀನ್ ।
ಪ್ರೀತೋಽಸ್ಮಿ ತೇ ಮಹಾಭಾಗೇ ತಪಸಾ ನಿಯಮೇನ ಚ ॥೮೮॥

**ಮಹಾದೇವ–** ಮಹಾಭಾಗ್ಯವಂತಳೇ! ನಿನ್ನ ತಪಸ್ಸಿನಿಂದ ಮತ್ತು ನಿಯಮದಿಂದ ನಾನು ಸಂತುಷ್ಟನಾಗಿದ್ದೇನೆ. ಹಿಂದಿನ ರೀತಿಯಲ್ಲಿಯೇ ಆ ಋಷಿಗಳನ್ನು ಸೇವಿಸು. ನಿನಗೆ ಮಂಗಳವಾಗಲಿ.

**ಇಂದ್ರಃ**

**ತತಸ್ತಾಂ ದರ್ಶಯಾಮಾಸ ಸ್ವರೂಪಂ ಭಗವಾನ್ ಹರಃ ।**
**ತತೋಽಬ್ರವೀತ್ ತದಾ ತೇಭ್ಯಃ ತಸ್ಯಾಸ್ತಚ್ಚರಿತಂ ಮಹತ್ ॥೮೯॥**

ಇಂದ್ರ– ಅನಂತರ ಭಗವಾನ್ ರುದ್ರನು ತನ್ನ ಮೂಲಸ್ವರೂಪವನ್ನು ತೋರಿಸಿದನು. ಅವನು ಋಷಿಗಳಿಗೆ ಅವಳು ಮಾಡಿದ ಮಹತ್ಕಾರ್ಯವನ್ನು ತಿಳಿಸಿದನು.

**ಮಹಾದೇವಃ**

**ಭವದ್ಭಿರ್ಹಿಮವತ್ಪೃಷ್ಠೇ ಯತ್ತಪಃ ಸಮುಪಾರ್ಜಿತಮ್ ।**
**ಅಸ್ಯಾಶ್ಚ ಯತ್ತಪೋ ವಿಪ್ರಾಃ ಸಮಮೇತನ್ಮತಂ ಮಮ ॥೯೦॥**

ಮಹಾದೇವ– ವಿಪ್ರರೇ! ನೀವು ಹಿಮಾಲಯದಲ್ಲಿ ಯಾವ ತಪಸ್ಸನ್ನು ಆಚರಿಸಿದ್ದೀರೋ, ಇವಳು ಆಚರಿಸಿದ ತಪಸ್ಸು ಅದಕ್ಕೆ ಸಮಾನವಾಗಿದೆ.

**ಅನಯಾ ಹಿ ತಪಸ್ವಿನ್ಯಾ ತಪಸ್ತಪ್ತಂ ಸುದುಶ್ಚರಮ್ ।**
**ಅನಶ್ನಂತ್ಯಾ ಪಚಂತ್ಯಾ ಚ ಸಮಾ ದ್ವಾದಶ ವಾರಿತಾಃ ॥೯೧॥**

ಹನ್ನೆರಡುವರ್ಷಗಳ ಕಾಲ ಇವಳು ಆಹಾರವನ್ನು ಬಿಟ್ಟು ಕಠಿಣವಾದ ತಪಸ್ಸನ್ನು ಆಚರಿಸಿದ್ದಾಳೆ.

**ಇಂದ್ರಃ**

**ತತಃ ಪ್ರೋವಾಚ ಭಗವಾನ್ ತಾಮೇವಾರುಂಧತೀಂ ಪುನಃ ॥೯೨॥**

ಇಂದ್ರ– ಭಗವಾನ್ ರುದ್ರನು ಪುನಃ ಅರುಂಧತಿಗೆ ಹೀಗೆ ಹೇಳುತ್ತಾನೆ.

**ಮಹಾದೇವಃ**

**ವರಂ ವೃಣೀಷ್ವ ಕಲ್ಯಾಣಿ ಯಸ್ತೇಽಭಿಲಷಿತೋ ಹೃದಿ ॥೯೩॥**

ಕರ್ಣ), ಅರ್ಜುನನ ಹೊರತಾಗಿ ಮತ್ತಾರೂ ಯಾರ ಬಾಣದ ಎದುರು ನಿಲ್ಲಲು ಶಕ್ಯವಿರಲಿಲ್ಲವೋ ಅಂತಹ ಶೂರನಾದ ದೇವಸದೃಶನಾದ (ಹುಟ್ಟುವಾಗಲೇ) ಕುಂಡಲಗಳನ್ನು ಕವಚವನ್ನು ಧರಿಸಿದ್ದ ಸೂರ್ಯನಿಗೆ ಸಮವಾದ ಕಾಂತಿಯನ್ನು ಹೊಂದಿದ್ದ ಕರ್ಣನು ಹಿಂದೆ ಹೇಗೆ ನಿನ್ನ ಪುತ್ರನಾಗಿ ಜನಿಸಿದನು? ಯಾರ ಬಾಹುಬಲದಿಂದ ನಾವೆಲ್ಲರೂ ಪರಿತಪ್ತರಾದೆವೊ ಆತನನ್ನು ವಸ್ತ್ರದಿಂದ ಬೆಂಕಿಯನ್ನು ಮುಚ್ಚಿಡುವುದು ಹೇಗೆ ಶಕ್ಯವಿಲ್ಲವೋ (ಅಂತಹವನನ್ನು) ಹೇಗೆ ಮರೆಮಾಚಿದ್ದಿ?

ಯಸ್ಯ ಬಾಹುಪ್ರಭಾವೇನ ವೈರಮಸ್ಮಾಸ್ವರೋಚಯತ್ ।
ಸುಯೋಧನಸ್ತು ತಂ ಜ್ಯೇಷ್ಠಂ ಕಥಂ ನೋದಿತವತ್ಯಸಿ ॥೨೧॥

ಯಾವಾತನ ಬಾಹುಬಲದಿಂದ ದುರ್ಯೋಧನನು ನಮ್ಮಲ್ಲಿ ವೈರವನ್ನು ಮಾಡುತ್ತಿದ್ದನೋ ಅಂತಹ ಅಣ್ಣನ ವಿಷಯವನ್ನು ಏಕೆ ಹೇಳಲಿಲ್ಲ?

ತಥಾ ಕರ್ಣಂ ಮಹೇಶ್ವಾಸಂ ಧಾರ್ತರಾಷ್ಟ್ರೈರುಪಾಸಿತಮ್ ।
ಉಪಾಸಿತಂ ಯಥಾಽಸ್ಮಾಭಿರ್ಬಲಂ ಗಾಂಡೀವಧನ್ವನಃ ॥೨೨॥

ನಾವು ಹೇಗೆ ಗಾಂಡಿವಧನುರ್ಧಾರಿಯನ್ನು ಆಧರಿಸಿಕೊಂಡಿದ್ದೆವೋ ಹಾಗೆ ದೊಡ್ಡಬಿಲ್ಲಾಳಾದ ಕರ್ಣನನ್ನು ಧೃತರಾಷ್ಟ್ರನ ಪುತ್ರರು ಆಶ್ರಯಿಸಿದ್ದರು.

ಭೂಮಿಪಾನಾಂ ಚ ಸರ್ವೇಷಾಂ ಲೋಕೇ ಬಲವತಾಂ ವರಮ್ ।
ನಾನ್ಯಃ ಕುಂತೀಸುತಾಜ್ಜಿಷ್ಣೋರ್ನಿಹನ್ಯಾದ್ ರಥಿನೋ ರಥೀ ॥೨೩॥

ಈ ಜಗದಲ್ಲಿ ಬಲಿಷ್ಠರಾದ ಎಲ್ಲ ಭೂಮಿಪಾಲರಿಂದ ಶ್ರೇಷ್ಠನಾದ ರಥಿಕರ ರಥಿಕನಾದ ಕರ್ಣನನ್ನು ಕುಂತೀಪುತ್ರನಾದ ಅರ್ಜುನನ ಹೊರತಾಗಿ ಮತ್ತಾರು ಸಂಹರಿಸುತ್ತಿದ್ದರು?

ಸ ನಃ ಪ್ರಥಮಜೋ ಭ್ರಾತಾ ಸರ್ವಶಸ್ತ್ರಭೃತಾಂ ವರಃ ।
ಅಸೂತ ತಂ ಭವತ್ಯಗ್ರೇ ಕಥಮದ್ಭುತವಿಕ್ರಮಮ್ ॥೨೪॥

ಎಲ್ಲ ಶಸ್ತ್ರಧಾರಿಗಳಿಂದ ಉತ್ತಮನಾದ ನಮ್ಮ ದೊಡ್ಡ ಅಣ್ಣನು, ಅಂತಹ ಮಹಾಪರಾಕ್ರಮಿಯನ್ನು ನೀನು ಮೊದಲು ಹೇಗೆ ಹೆತ್ತಿರುವಿ?

**ಅಹೋ ಭವತ್ಯಾ ಮನ್ತ್ರೇಣ ಗೃಹೀತೇನ ವಯಂ ಹತಾಃ ।**
**ನಿಧನೇನ ಹಿ ಕರ್ಣಸ್ಯ ಪೀಡಿತಾಃ ಸಹಬಾಂಧವಾಃ ॥೨೫॥**

ಅಯ್ಯೋ! ನಿನ್ನ ಗುಟ್ಟಿನಿಂದ ನಾವು ಮೃತರಾದೆವು, ಕರ್ಣನ ಸಾವಿನಿಂದ ಬಂಧುಗಳಿಂದ ಕೂಡಿದ ನಾವು ಪೀಡೆಗೆ ಒಳಗಾದೆವು.

**ಅಭಿಮನ್ಯೋರ್ವಿನಾಶಾದ್ಧಿ ದ್ರೌಪದೇಯವಧಾದಪಿ ।**
**ಪಾಂಚಾಲಾನಾಂ ವಧಾಚ್ಚಾಪಿ ಕುರೂಣಾಂ ಘಾತನಾದಪಿ ॥೨೬॥**

**ತತಃ ಶತಗುಣಂ ದುಃಖಮಿದಮಾಪತಿತಂ ಮಹತ್ ॥೨೭॥**

ಅಭಿಮನ್ಯುವಿನ ಸಾವಿಗಿಂತಲೂ ದ್ರೌಪದಿಯ ಮಕ್ಕಳ ಸಾವಿಗಿಂತಲೂ ಪಾಂಚಾಲರ ಸಾವಿಗಿಂತಲೂ ಕೌರವರ ಸಾವಿಗಿಂತಲೂ ನೂರುಪಟ್ಟು ಹೆಚ್ಚು ದುಃಖವು ಬಂದೊದಗಿತು.

**ಕರ್ಣಮೇವಾನುಶೋಚಾಮಿ ದಹ್ಯಾಮ್ಯಗ್ನಾವಿವಾಹಿತಾಃ ।**
**ನ ಚ ಮೇ ಕಿಂಚಿದಪ್ರಾಪ್ಯಂ ಭವೇದಪಿ ದಿವಿ ಸ್ಥಿತಮ್ ॥೨೮॥**

**ನ ಚ ಸ್ಮ ವೈಶಸಂ ಘೋರಂ ಕೌರವಾಣಾಂ ಕೃತಂ ಭವೇತ್ ॥೨೯॥**

ಕರ್ಣನ ಬಗ್ಗೆ ಚಿಂತಿಸುವೆ, ಬೆಂಕಿಯಲ್ಲಿ ದೂಡಿಸಿಕೊಂಡವನಂತೆ ಪರಿತಪಿಸುತ್ತಿರುವೆನು, ನನಗೆ ಹೊಂದಲಾಗದ್ದು ಯಾವುದೂ ಇರಲಿಲ್ಲ, ಸ್ವರ್ಗದಲ್ಲಿದ್ದರೂ (ಆ ಪದಾರ್ಥವನ್ನು) ಹೊಂದುತ್ತಿದ್ದೆ, ಕೌರವರನ್ನು ಕತ್ತರಿಸುವ ಘೋರಕೃತ್ಯವೇ (ಕರ್ಣನು ನಮ್ಮ ಅಣ್ಣ ಎಂದು ಮೊದಲೇ ತಿಳಿದಿದ್ದರೆ) ನಡೆಯುತ್ತಿರಲಿಲ್ಲ.

**ವೈಶಂಪಾಯನಃ**

**ಏವಂ ವಿಲಪ್ಯ ಕರುಣಂ ಧರ್ಮರಾಜೋ ಯುಧಿಷ್ಠಿರಃ ।**
**ವದನ್ ಸ ಶನಕೈ ರಾಜನ್ ಚಕಾರಾಸ್ಯೋದಕಂ ಪ್ರಭುಃ ॥೩೦॥**

ವೈಶಂಪಾಯನ– ರಾಜನೆ! ಯುದ್ಧದಲ್ಲಿ ಸ್ಥಿರವಾಗಿ ನಿಲ್ಲುವ ಧರ್ಮರಾಜನು ಈ ರೀತಿಯ ಕರುಣಾಜನಕವಾಗುವಂತೆ ರೋದಿಸಿ, (ಆತನ ವಿಷಯವನ್ನು) ಮೆತ್ತಗೆ ಹೇಳಿ, ಸ್ವಾಮಿಯಾದ ಧರ್ಮಜನು ತರ್ಪಣವನ್ನು ನೀಡಿದನು.

ತತೋ ವಿನೇದುಃ ಸಹಸಾ ಸ್ತ್ರಿಯಃ ಪುಂಭಿಶ್ಚ ಸರ್ವಶಃ ।
ಅಭಿತೋ ಯಾಃ ಸ್ಥಿತಾಸ್ತತ್ರ ತಸ್ಮಿನ್ನುದಕಕರ್ಮಣಿ ॥೩೧॥

ಅನಂತರದಲ್ಲಿ ಸುತ್ತಲೂ ಅಲ್ಲಿ ಆ ತರ್ಪಣಕ್ರಿಯೆಗಾಗಿ ಜಮೆಯಾಗಿದ್ದರೋ ಆ ಎಲ್ಲ ಸ್ತ್ರೀಯರು ಪುರುಷರು ಗಟ್ಟಿಯಾಗಿ ರೋದಿಸಿದರು.

ತತಃ ಸಮಾನಯಾಮಾಸ ಕರ್ಣಸ್ಯ ಚ ಪರಿಚ್ಛದಮ್ ।
ಸ್ತ್ರಿಯಃ ಕುರುಪತಿಃ ಶ್ರೀಮಾನ್ ಪ್ರೇಮ್ಣಾ ಭ್ರಾತುರ್ಯುಧಿಷ್ಠಿರಃ ॥೩೨॥

ಅನಂತರದಲ್ಲಿ ಕಾಂತಿಮಂತನಾದ ಕುರುಪತಿಯಾದ ಯುಧಿಷ್ಠಿರನು ಅಣ್ಣನಾದ ಕರ್ಣನ ಪರಿವಾರದವರನ್ನು ಪತ್ನಿಯರನ್ನು ಕರೆಸಿದನು.

ಸ ತಾಭಿಃ ಸಹ ಧರ್ಮಾತ್ಮಾ ಪ್ರೇತಕಾರ್ಯಮನಂತರಮ್ ।
ಕೃತ್ವೋತ್ತತಾರ ಗಂಗಾಯಾಃ ಸಲಿಲಾದ್ವ್ಯಾಕುಲೇಂದ್ರಿಯಃ ॥೩೩॥

ಕಳವಳಗೊಂಡ ಇಂದ್ರಿಯನಾದ ಧರ್ಮಾತ್ಮನು ಅವರೆಲ್ಲರಿಂದ ಕೂಡಿಕೊಂಡು ಆನಂತರದ ಪ್ರೇತಕಾರ್ಯಗಳನ್ನು ಮುಗಿಸಿ ಗಂಗೆಯಿಂದ ಮೇಲೆದ್ದನು.

ಸರ್ವಂ ಚಕಾರ ಕರ್ಣಸ್ಯ ವಿಧಿವದ್ ಭೂರಿದಕ್ಷಿಣಮ್ ॥೩೪॥

ಕರ್ಣನಿಗಾಗಿ ವಿಧೀ-ಶಾಸ್ತ್ರಾನುಸಾರವಾಗಿ ಭಾರಿ ದಕ್ಷಿಣೆಯನ್ನು ನೀಡುವುದೇ ಮುಂತಾದ ಎಲ್ಲವನ್ನೂ ಮಾಡಿದನು.

ಪಾಪೇನಾಽಸೌ ಮಯಾ ಶ್ರೇಷ್ಠೋ ಭ್ರಾತಾ ಜ್ಞಾತಿರ್ನಿಪಾತಿತಃ ।
ಅತೋ ಮನಸಿ ಯದ್‌ಗುಹ್ಯಂ ಸ್ತ್ರೀಣಾಂ ತನ್ನ ಭವಿಷ್ಯತಿ ॥೩೪॥

ದುಷ್ಕರ್ಮದ ಪ್ರಭಾವದಿಂದ ಶ್ರೇಷ್ಠನಾದ ಅಣ್ಣನನ್ನು ಸಂಹರಿಸಿರುವೆನು. ಆದ್ದರಿಂದ ಇನ್ನು ಮಹಿಳೆಯರ ಮನದಲ್ಲಿ ಗುಟ್ಟು ನಿಲ್ಲದಿರಲಿ (ಎಂದು ಧರ್ಮರಾಜನು ನುಡಿದನು).

ಸ ರಾಜಾ ಧೃತರಾಷ್ಟ್ರಶ್ಚ ಕೃತಾಂಜಲಿರತಂದ್ರಿತಃ ।
ಸಮುತ್ತತಾರ ಗಂಗಾಯಾಂ ಭ್ರಾತೃಭಿಃ ಸಹ ಭಾರತ ॥೩೫॥

ಭರತಕುಲೋತ್ಪನ್ನನೇ! ಆಲಸ್ಯವಿಲ್ಲದಂತೆ ಸಹೋದರರಿಂದ ಕೂಡಿದ ರಾಜನು ಮತ್ತು ಧೃತರಾಷ್ಟ್ರನು ತರ್ಪಣವನ್ನು ಇತ್ತು, ಗಂಗೆಯಿಂದ ಮೇಲೆದ್ದರು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ ಸ್ತ್ರೀಪರ್ವಣಿ ಸಪ್ತವಿಂಶೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಸ್ತ್ರೀಪರ್ವದಲ್ಲಿ ಇಪ್ಪತ್ತೇಳನೆಯ ಅಧ್ಯಾಯ ಮುಗಿಯಿತು.

**॥ ಸಮಾಪ್ತಂ ಶ್ರಾದ್ಧಪರ್ವ ॥**

**॥ ಸಮಾಪ್ತಂ ಸ್ತ್ರೀಪರ್ವ ॥**

★ ★ ★ ★ ★

ನ ಹಿ ಪ್ರಮಾದಾತ್ ಪರಮಸ್ತಿ ಕಶ್ಚಿದ್
ವಧೋ ನರಾಣಾಮಿಹ ಜೀವಲೋಕೇ ।
ಪ್ರಮತ್ತಮರ್ಥಾ ಹಿ ನರಂ ಸಮಂತಾತ್
ತ್ಯಜಂತ್ಯನರ್ಥಾಶ್ಚ ಸಮಾವಿಶಂತಿ ॥

ಈ ಮನುಜಲೋಕದಲ್ಲಿ ಅಜಾಗರೂಕತೆಗಿಂತಲೂ
ದೊಡ್ಡದಾದ ಮೃತ್ಯುವು ಮತ್ತೊಂದಿಲ್ಲ, ಪ್ರಮತ್ತನಾದ
ಮನುಜನ ಸಮಸ್ತ ಅರ್ಥವು ನಾಶವಾಗುವುದು,
ಅನರ್ಥಗಳು (ಪ್ರಮತ್ತನನ್ನು) ಮುತ್ತುವವು.

ISBN : 978-93-88813-01-3